# ಎಂ.ವಿಶ್ವೇಶ್ವರಯ್ಯ ಮತ್ತು ಗಾಂಧಿ

## (ಚಿಂತನೆಗಳ ತೌಲನಿಕ ಅಧ್ಯಯನ)

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್.ನಿಬಂಧ]

ಸಂಶೋಧಕ

ಗಂಗಾಧರ

ಮಾರ್ಗದರ್ಶಕರು

ಡಾ.ಸಿ.ಆರ್.ಗೋವಿಂದರಾಜು









ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೨

# ಎಂ.ವಿಶ್ವೇಶ್ವರಯ್ಯ ಮತ್ತು ಗಾಂಧಿ

## (ಚಿಂತನೆಗಳ ತೌಲನಿಕ ಅಧ್ಯಯನ)

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಎಂ.ಫಿಲ್.ನಿಬಂಧ]


ಸಂಶೋಧಕ

ಗಂಗಾಧರ

ಮಾರ್ಗದರ್ಶಕರು

ಡಾ.ಸಿ.ಆರ್.ಗೋವಿಂದರಾಜು







ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


ಏಪ್ರಿಲ್ ೨೦೦೨

97A

## ಮಾರ್ಗದರ್ಶಕರ ಪ್ರಮಾಣಪತ್ರ

ವಿಶ್ವೇಶ್ವರಯ್ಯ ಮತ್ತು ಗಾಂಧಿ (ಚಿಂತನೆಗಳ ತೌಲನಿಕ ಅಧ್ಯಯನ) ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಶ್ರೀ ಗಂಗಾಧರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಸಿ.ಆರ್.ಗೋವಿಂದರಾಜು
ಮಾರ್ಗದರ್ಶಕರು ಮತ್ತು ಪ್ರವಾಚಕರು
ಚರಿತ್ರೆವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೨/೦೪/೦೨

# ಪ್ರಮಾಣ ಪತ್ರ

ವಿಶ್ವೇಶ್ವರಯ್ಯ ಮತ್ತು ಗಾಂಧಿ (ಚಿಂತನೆಗಳ ತೌಲನಿಕ ಅಧ್ಯಯನ) ಎಂಬ ನಿಬಂಧವನ್ನು ಡಾ.ಸಿ.ಆರ್.ಗೋವಿಂದರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Gangadhara

ಗಂಗಾಧರ

ಸಂಶೋಧಕ

ಚರಿತ್ರೆವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 22.08.2003.

# ನನ್ನ ಮಾತು

ಉನ್ನತ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಮಾನ್ಯ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ, ಮಾನ್ಯ ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಅವರುಗಳಿಗೆ ನನ್ನ ಅನಂತ ನಮನಗಳು.

ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕವಾಗಿ ಅನುಮತಿ ನೀಡಿದ ಅಧ್ಯಯನಾಂಗದ ನಿರ್ದೇಶಕರಾದ ಡಾ.ಹಿ.ಚಿ.ಬೋರಲಿಂಗಯ್ಯ, ಚರಿತ್ರೆ ವಿಭಾಗದ ಅಂದಿನ ಮುಖ್ಯಸ್ಥರಾದ ಪ್ರೊ.ಲಕ್ಷ್ಮಣ್ ತೆಲಗಾವಿ ಹಾಗೂ ಇಂದಿನ ಮುಖ್ಯಸ್ಥರಾದ ಡಾ.ಟಿ.ಪಿ.ವಿಜಯ್ ಅವರಿಗೆ ನನ್ನ ಧನ್ಯವಾದಗಳು.

ನನಗೆ ನಿಬಂಧದ ವಿಷಯ ಸೂಚಿಸಿ, ಅಧ್ಯಯನದುದ್ದಕ್ಕೂ ತಪ್ಪುಗಳನ್ನು ತಿದ್ದುತ್ತ, ತಿಳಿಹೇಳಿ ತಾಳ್ಮೆಯ ಮಾರ್ಗದರ್ಶನ ನೀಡಿದ ಡಾ.ಸಿ.ಆರ್.ಗೋವಿಂದರಾಜು ಅವರಿಗೆ ವಂದನೆಗಳು.

ನನ್ನ ಅಧ್ಯಯನಕ್ಕೆ ಸ್ಫೂರ್ತಿ ಮತ್ತು ಸೂಕ್ತ ಸಲಹೆ ನೀಡಿದ ಡಾ.ಚಿನ್ನಸ್ವಾಮಿ ಸೋಸಲೆ, ಮೋಹನಕೃಷ್ಣ ರೈ, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಡಾ.ವೈ.ಎಚ್.ನಾಯಕವಾಡಿ, ಡಾ.ಡಿ.ಎಸ್. ಜಯಪ್ಪಗೌಡ, ಪ್ರೊ.ಬಸವರಾಜ ಮಲಶೆಟ್ಟಿ, ಡಾ.ಪರಮಶಿವಮೂರ್ತಿ, ಶ್ರೀ ಗುರುಪ್ರಸಾದ್, ಶ್ರೀ ಹರಿಶ್ಚಂದ್ರ ದಿಗ್ಗಿಂಕರ್ ಹಾಗೂ ಚರಿತ್ರೆ ವಿಭಾಗದ ಸಿಬ್ಬಂದಿವರ್ಗದವರಿಗೂ ನನ್ನ ನಮನಗಳು.

ನನ್ನ ಅಧ್ಯಯನಕ್ಕೆ ಪೂರಕ ಗ್ರಂಥಗಳನ್ನು ಒದಗಿಸಿದ ಕನ್ನಡ ವಿಶ್ವವಿದ್ಯಾಲಯ ಗ್ರಂಥಾಲಯ, ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ, ಕನ್ನಡ ಸಾಹಿತ್ಯ ಪರಿಷತ್ತು, ಕೇಂದ್ರ ಗ್ರಂಥಾಲಯ ಹಾಗೂ ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ ಈ ಎಲ್ಲಾ ಗ್ರಂಥಪಾಲಕರು ಮತ್ತು ಸಿಬ್ಬಂದಿ ವರ್ಗದವರ ಸಹಕಾರವನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ನೂರಾರು ಕಷ್ಟಗಳ ನಡುವೆಯೂ ಹಗಲು ಇರಳು ಮಗನ ಓದುವಿನ ಮತ್ತು ಏಳ್ಗೆಯನ್ನು ಸದಾ ಬಯಸುತ್ತಿರುವ ತಂದೆ ತಾಯಂದಿರುಗಳಿಗೆ ಋಣಿಯಾಗಿರುತ್ತೇನೆ. ವಿಶೇಷವಾಗಿ ನನ್ನನ್ನು ಪ್ರೀತಿಯಿಂದ ಕಾಣುವ ಅತ್ತೆ ಮಾವರಾದ ಆರ್.ಪರಶಿವ, ಪುಷ್ಪ ಪರಶಿವ, ಬಾವ ರಾಜೇಶ. ರೂಪ, ಚಿಕ್ಕಪ್ಪ, ಚಿಕ್ಕಮ್ಮರಾದ ಶಿವಲಿಂಗಯ್ಯ, ಶಿವಮ್ಮ ಹಾಗೂ ಕುಟುಂಬ ವರ್ಗದವರಿಗೂ ನನ್ನ ಹೃದಯಪೂರ್ವಕ ನಮನಗಳು.

ಸ್ನೇಹಿತರಾಗಿ, ಹಿತೈಷಿಗಳಾಗಿ ನನಗೆ ಅನೇಕ ರೀತಿಯ ಸಹಾಯ ಮಾಡಿದ ಕೆ.ಆರ್.ಜೆ.ರಾಜಕುಮಾರ್, ಯರ್ರಿಸ್ವಾಮಿ, ಎ.ಚನ್ನಪ್ಪ, ಕೆ.ಮಹೇಶ, ಜಯಣ್ಣ, ಕರಿಸಿದ್ಧನಗೌಡ, ಕವಿತರಾಣಿ, ಭಾರತಿ, ಕೆ.ಯೋಗ, ಶಿವಕುಮಾರ್, ಕೆ.ರಾಜು, ಎಂ.ಜಯಣ್ಣ, ಎಚ್.ಎಂ.ಬಸವರಾಜ, ಸುಭಾಷ್, ಸುದರ್ಶನ, ಪ್ರಕಾಶ ಹುಗ್ಗಿ, ಸುರೇಶ್ ಹಾಗೂ ಕಮಲಾಪುರದ ಸ್ನೇಹಿತರಿಗೂ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸ್ಫೂರ್ತಿ ನೀಡಿದ ಎಲ್ಲಾ ಸ್ನೇಹಿತರಿಗೂ ಹಾಗೂ ಅಚ್ಚುಕಟ್ಟಾಗಿ ಅಕ್ಷರವನ್ನು ಸಂಯೋಜಿಸಿದ ಶ್ರೀ ಎ.ಎಂ.ಕೃಪಾಶಂಕರ್ ಅವರಿಗೆ ವಂದನೆಗಳು.

ಗಂಗಾಧರ

# ಪರಿವಿಡಿ

## ಅಧ್ಯಾಯ-೧

# ಅಧ್ಯಯನದ-ಹಿನ್ನೆಲೆ-ಪ್ರವೇಶ-ಸ್ವರೂಪ-ಮಹತ್ವ, ವಿಧಿ-ವಿಧಾನಗಳು ಹಾಗೂ ಮಿತಿಗಳು

ಭಾರತವು ಜಗತ್ತಿನಲ್ಲಿ ವಿಶಾಲವಾದ ದೇಶವಾಗಿದ್ದು, ವಿಭಿನ್ನತೆಯಲ್ಲಿ ಏಕತೆಯನ್ನು ಪ್ರತಿಬಿಂಬಿಸುತ್ತಿದೆ. ಇಂಥ ವಿಶಾಲವಾದ ದೇಶದಲ್ಲಿ ಅನೇಕ ನಾಯಕರು ಹುಟ್ಟಿ ವಿಶಿಷ್ಟತೆಯನ್ನು ಮೆರೆವಿದ್ದಾರೆ. ಆಧುನಿಕ ಭಾರತದ ಚರಿತ್ರೆಯ ದೃಷ್ಟಿಯಿಂದ ತಮ್ಮದೇ ಆದ ರೀತಿಯಲ್ಲಿ ಪ್ರಭಾವ ಬೀರಿದವರ ಪೈಕಿ ಎಂ. ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ಪ್ರಮುಖರು. ಇವರು ದೇಶದ ಅಭಿವೃದ್ಧಿ, ಪ್ರಗತಿಯ ವಿಚಾರಗಳಲ್ಲಿ ಚಿಂತಿಸಿದ ಮತ್ತು ತೆಗೆದುಕೊಂಡ ನಿರ್ಣಯಗಳು ಇಂದಿಗೂ ಸಮಂಜಸವಾಗಿವೆ. ಇವರಿಬ್ಬರು ಹಾಕಿಕೊಟ್ಟ ಭದ್ರವಾದ ತಳಪಾಯದಿಂದ ದೇಶವು ಅಭಿವೃದ್ಧಿ ಹೊಂದಲು ಸಾಧ್ಯ ಆಗುತ್ತಿದೆ ಎಂದರೂ ತಪ್ಪಿಲ್ಲ. ಆದ್ದರಿಂದ ಇವರಿಬ್ಬರ ಆರ್ಥಿಕ ಚಿಂತನೆಗಳನ್ನು ಚರಿತ್ರೆಯ ದೃಷ್ಟಿಯಿಂದ ಚರ್ಚಿಸುವುದು ಸೂಕ್ತ.

ಪ್ರಸ್ತುತ ಅಧ್ಯಯನದ ಶೀರ್ಷಿಕೆಯೇ ಹೇಳುವಂತೆ ಇದು ಎಂ.ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಚಿಂತನೆ ಹಾಗೂ ಚಟುವಟಿಕೆಗಳನ್ನು ಕುರಿತ ತೌಲನಿಕ ಅಧ್ಯಯನ. ಭಾರತವು ಸ್ವಾತಂತ್ರ್ಯಗಳಿಸುವವರೆಗೂ ಬ್ರಿಟಿಷ್ ವಸಾಹತುಶಾಹಿ ಆಡಳಿತಕ್ಕೆ ಸಿಲುಕಿದ್ದದ್ದು ಚರಿತ್ರೆಗೆ ಸೇರಿಹೋದ ಸಂಗತಿ. ಈ ಸಂದರ್ಭದಲ್ಲಿ ವಸಾಹತುಶಾಹಿ ಪ್ರಭುತ್ವ ತೆಗೆದುಕೊಳ್ಳುತ್ತಿದ್ದ ನಿರ್ಣಯಗಳು ಹಲವು ಬಗೆಯ ಅವಸ್ಥಾಂತರಗಳಿಗೆ ಗುರಿ ಮಾಡಿದ್ದವು. ಇಂಥ ಅವಸ್ಥಾಂತರಗಳಿಗೆ ಒಳಗಾದ ನಮ್ಮ ಮನೋಜೀವನ ಇಂದಿಗೂ ಅದರಿಂದ ಪೂರ್ಣವಾಗಿ ಮುಕ್ತವಾಗಿಲ್ಲ. ಅಷ್ಟೇ ಅಲ್ಲದೆ ಈ ಹೊತ್ತಿನ ನವವಸಾಹತುಶಾಹಿ ಸನ್ನಿವೇಶವು ಸಹ ನಮ್ಮನ್ನು ಜಾಗತೀಕರಣ ಮತ್ತು ಖಾಸಗೀಕರಣಗಳ ಕಡೆಗೆ ದೂಡಿದೆ. ಈ ಹಿನ್ನೆಲೆಯಲ್ಲಿ ಇವರಿಬ್ಬರ ಚಿಂತನೆಗಳು ನಮ್ಮ ಸಂದರ್ಭಕ್ಕೆ ಎಷ್ಟರಮಟ್ಟಿಗೆ ಪ್ರಸ್ತುತವಾಗುತ್ತಿವೆ ಎಂಬುದನ್ನು ಪರಿಶೀಲಿಸುವ ಜರೂರು ಇದೆ. ಎಂ.ವಿಶ್ವೇಶ್ವರಯ್ಯ ಈ ನಾಡಿನ ಅಥವಾ ದೇಶದ ಕೃಷಿ, ಗ್ರಾಮ ಪರಿಸರ, ಗೃಹ ಕೈಗಾರಿಕೆ, ದೊಡ್ಡಕೈಗಾರಿಕೆ, ವಿಜ್ಞಾನ-ತಂತ್ರಜ್ಞಾನ ನೀರಾವರಿ, ಶಿಕ್ಷಣ, ಉದ್ಯೋಗ, ಆರ್ಥಿಕ ಅಭಿವೃದ್ಧಿ ಮೊದಲಾದ ನೆಲೆಗಳಲ್ಲಿ ತೆಗೆದುಕೊಂಡ ನಿರ್ಣಯಗಳು ಈ ಹೊತ್ತಿಗೂ ಅನುಕರಣೀಯ. ಅವರಂತೆ ರಾಷ್ಟ್ರೀಯ ಮಟ್ಟದಲ್ಲಿ ಗಾಂಧಿ ಅವರು ದೇಶವನ್ನು ಬ್ರಿಟಿಷರ ದಾಸ್ಯದಿಂದ ಮುಕ್ತವಾಗಿಸುವುದರ ಕಡೆಗೆ ತಮ್ಮ ಗಮನವನ್ನು ಹರಿಸಿದವರು. ಅದರ ಜೊತೆಗೆ ವಿಶ್ವೇಶ್ವರಯ್ಯನವರು ನಡೆಸಿದ್ದ ಚಿಂತನೆಗಳ ಅಥವಾ ವಿಚಾರಗಳ ಕಡೆಗೂ ತಮ್ಮ

ಗಮನಹರಿಸಿದ್ದರು. ಇವರಿಬ್ಬರ ಆಶಯ ದೇಶದ ಸ್ವಾತಂತ್ರ್ಯ ಹಾಗೂ ಪ್ರಗತಿಯೇ ಆಗಿದ್ದರೂ ಅನುಸರಿಸಿದ ಮಾರ್ಗಗಳು ಮಾತ್ರ ಭಿನ್ನ.

ವಿಶ್ವೇಶ್ವರಯ್ಯ ಮತ್ತು ಗಾಂಧಿ ಭಾರತದ ಮುಕ್ತತೆಯ ವಿಚಾರದಲ್ಲಿ, ರಾಷ್ಟ್ರೀಯತೆಯನ್ನು ಅಭಿವ್ಯಕ್ತಿಸುವ ದಿಸೆಯಲ್ಲಿ ನಡೆಸಿದ ಆಲೋಚನೆಗಳನ್ನು ತೌಲನಿಕವಾಗಿ ಅಧ್ಯಯನ ನಡೆಸಿರುವುದು ವಿರಳ. ಈ ನಿಟ್ಟಿನಲ್ಲಿ ಇವರಿಬ್ಬರ ನೆಲೆಗಳು ಭಿನ್ನವಾಗಿದ್ದರೂ ಹಲವು ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ಜರೂರು ಇದೆ. ಅಲ್ಲದೇ ಇವರಿಬ್ಬರ ಆಲೋಚನೆಗಳು ಭಿನ್ನವಾಗಿದ್ದರೂ, ಇಂದಿಗೂ ಒಂದೊಂದು ರೀತಿಯಲ್ಲಿ ಪ್ರಸ್ತುತ ಆಗುತ್ತಲೇ ಇವೆ. ಇವರಿಬ್ಬರ ಆಲೋಚನೆಗಳು ಅವರಲ್ಲೂ ಆರ್ಥಿಕ ದೃಷ್ಟಿಕೋನಗಳನ್ನು ಕುರಿತು ಪರಿಶೀಲಿಸುವುದೇ ಈ ಅಧ್ಯಯನದ ಆಶಯ.

ರಾಷ್ಟ್ರದ ಪ್ರಗತಿಗಾಗಿ ಹಾಗೂ ಹಿತಚಿಂತನೆಗಾಗಿ ಒಬ್ಬರು ದೇಶಿಯ ನೆಲೆಯಿಂದಲೂ, ಇನ್ನೊಬ್ಬರು ವಿದೇಶಿ ಚಿಂತನೆಗಳ ನೆಲೆಯಿಂದಲೂ ಆಲೋಚಿಸುತ್ತಿದುದ್ದುಂಟು. ಆದ್ದರಿಂದ ಈ ಅಧ್ಯಯನ ನಡೆಸಲು ಇಂದಿಗೂ ಯೋಗ್ಯವಾಗಿದೆ. ಇವರಿಬ್ಬರು ಗ್ರಾಮ, ಕೃಷಿ, ಕೈಗಾರಿಕೆ, ನೀರಾವರಿ ಗೃಹಕೈಗಾರಿಕೆ, ಔದ್ಯೋಗೀಕರಣ, ಶಿಕ್ಷಣ, ಬಡತನ, ದೇಶರಕ್ಷಣೆ, ಅಭಿವೃದ್ಧಿ ಮೊದಲಾದ ವಿಚಾರಗಳನ್ನಷ್ಟೇ ಅಲ್ಲದೆ ಜನ, ಸಮಾಜ, ಜಾತಿ, ಧರ್ಮ, ಮೀಸಲಾತಿಗಳಂತ ವಿಚಾರಗಳ ಕಡೆಗೂ ಭಿನ್ನವಾಗಿ ಆಲೋಚಿಸಿದವರು. ವಿಶ್ವೇಶ್ವರಯ್ಯ ಅವರು "ಔದ್ಯೋಗೀಕರಣ ಇಲ್ಲವೇ ಮರಣ" ಎಂದರೆ, ಗಾಂಧಿ ಅವರು "ಔದ್ಯೋಗೀಕರಣದಿಂದಲೇ ಮರಣ" ಎಂದು ವಾದಿಸಿದವರು. ಈ ಕುರಿತ ಭಿನ್ನ ಆಲೋಚನೆಗಳನ್ನು ಜಾಗತೀಕರಣದ ಇಂದಿನ ಸಂದರ್ಭದಲ್ಲಿಟ್ಟು ತೌಲನಿಕವಾಗಿ ಪರಿಶೀಲಿಸುವ ಅಗತ್ಯತೆ ಇದೆ. ಈ ಎಲ್ಲ ದೃಷ್ಟಿಗಳಿಂದ ಪ್ರಸ್ತುತ ಅಧ್ಯಯನವು ತನ್ನದೇ ಆದ ಮಹತ್ತ್ವವನ್ನು ಪಡೆದುಕೊಂಡಿದೆ.

## ಅಧ್ಯಯನ ವ್ಯಾಪ್ತಿ ಮತ್ತು ಮಿತಿಗಳು

ಇದನ್ನೊಂದು ಪ್ರಾಥಮಿಕ ಹಂತದ ಅಧ್ಯಯನವೆಂದು ಕರೆಯುವುದು ಸೂಕ್ತವಾಗಿದೆ. ಏಕೆಂದರೆ ಗಾಂಧಿ ಮತ್ತು ವಿಶ್ವೇಶ್ವರಯ್ಯನವರ ಚಿಂತನೆಗಳು ಬಹಳ ವ್ಯಾಪಕತೆಯಿಂದ ಕೂಡಿವೆ. ಅವರಲ್ಲೂ ಗಾಂಧಿಯವರ ವಿಚಾರಧಾರೆಗಳು ವಿಭಿನ್ನತೆಯಿಂದ ಕೂಡಿದ್ದು ವ್ಯಾಪಕ ಅಧ್ಯಯನ ಬಯಸುವಂಥವು. ಇವರಿಬ್ಬರ ಜೀವನ ಮತ್ತು ಸಾಧನೆಗಳನ್ನು ಕುರಿತ ಬಹಳಷ್ಟು ಅಧ್ಯಯನಗಳು ಆಗಿವೆ. ಆದರೆ ಅಂಥ ಅಧ್ಯಯನಗಳು ಪುನರುಕ್ತಿ ಆಗದಂತೆ ಎಚ್ಚರ ವಹಿಸುವ ಅವಶ್ಯಕತೆ ಇದೆ. ಆದರೆ ಇಲ್ಲಿ ಸ್ವಾತಂತ್ರ್ಯಪೂರ್ವದ ಮೈಸೂರು ಸಂಸ್ಥಾನ ಮತ್ತು ಭಾರತದ ಸಂದರ್ಭದಲ್ಲಿ ಇವರಿಬ್ಬರ ಚಿಂತನಾ ಕ್ರಮಗಳನ್ನು ಮಾತ್ರ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಅಲ್ಲದೆ ಇಂದಿನ ಆಧುನಿಕತೆ ವಿಜ್ಞಾನ-

ತಂತ್ರಜ್ಞಾನ ಮತ್ತು ಜಾಗತೀಕರಣ ಮಿತಿಗಳಲ್ಲಿ ಇವರ ಚಿಂತನೆಗಳನ್ನು ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಅವರುಗಳು ಚಿಂತಿಸಿದ ಗ್ರಾಮ, ಕೃಷಿ, ಆರೋಗ್ಯ, ಸಾರಿಗೆ-ಸಂಪರ್ಕ, ಶಿಕ್ಷಣ, ಗೃಹಕೈಗಾರಿಕೆಗಳು, ದೊಡ್ಡಕೈಗಾರಿಕೆಗಳು, ದೇಶದ ರಕ್ಷಣೆ, ರಾಷ್ಟ್ರೀಯತೆ, ಮೀಸಲಾತಿಯಂಥ ವಿಚಾರಧಾರೆಗಳನ್ನು ಮಾತ್ರ ಪರಿಶೀಲಿಸಿ, ಚರ್ಚಿಸಿ, ವಿಶ್ಲೇಷಿಸಲಾಗುವುದು.

## ಅಧ್ಯಯನದ ವಿಧಿ-ವಿಧಾನಗಳು

ಪ್ರಸ್ತುತ ಅಧ್ಯಯನವು ಚರಿತ್ರೆಯ ವಿಧಿ-ವಿಧಾನಗಳನ್ನು ಬಳಸಿಕೊಂಡಿದೆ. ಇದಕ್ಕೆ ಪೂರಕವಾಗುವಂತೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳ ಆಕರಗಳು ಬಳಕೆ ಆಗಿವೆ. ಸರ್ಕಾರಿ ಹಾಗೂ ಖಾಸಗಿ ಗ್ರಂಥಾಲಯಗಳಲ್ಲದೆ, ಕರ್ನಾಟಕ ರಾಜ್ಯ ಪತ್ರಾಗಾರದ ಕೆಲವೊಂದು ಕಡತಗಳನ್ನೂ ಪರಿಶೀಲಿಸಲಾಗಿದೆ. ಅಷ್ಟೇ ಅಲ್ಲದೆ ಆಧುನಿಕತೆ ಮತ್ತು ಜಾಗತೀಕರಣದ ವೈಜ್ಞಾನಿಕ ವಿಚಾರಧಾರೆಗಳನ್ನು ತಿಳಿಯಕೊಳ್ಳಲು ವಿಚಾರ ಸಂಕೀರ್ಣಗಳಲ್ಲಿ ನಡೆಸಿದ ಚರ್ಚೆಗಳನ್ನು ಪರಿಶೀಲಿಸಿ ಅಳವಡಿಸಿಕೊಂಡಿದೆ. ಇವೆಲ್ಲವನ್ನು ಚರಿತ್ರೆಯ ದೃಷ್ಟಿಕೋನಗಳಿಂದ ಸೂಕ್ಷ್ಮವಾಗಿ ಪರಿಶೀಲಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ.

## ಅಧ್ಯಯನದ ಸ್ವರೂಪ

ಎಂ.ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಆಲೋಚನೆ, ಅಭಿಪ್ರಾಯಗಳು. ಕೈಗೊಂಡ ಕಾರ್ಯಗಳನ್ನು ವಿಶ್ಲೇಷಿಸುವುದೇ ಈ ಅಧ್ಯಯನದ ಸ್ವರೂಪ.

ಮೊದಲನೆಯ ಅಧ್ಯಾಯದಲ್ಲಿ ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಜೀವನ ವಿಧಾನಗಳನ್ನು ತೂಲನೆ ಮಾಡಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಇವರಿಬ್ಬರು ಹೊಂದಿದ ಜೀವನ ಶೈಲಿ, ನಡೆನುಡಿಗಳು ಅವರ ಮೇಲೆ ಪ್ರಭಾವ ಬೀರಿದ ಅಂಶಗಳನ್ನು ಪರಿಗಣಿಸಲಾಗಿದೆ. ಅಲ್ಲದೇ ಧರ್ಮ-ಸಂಪ್ರದಾಯದ ವಿಷಯಗಳು ಹಾಗೂ ಅದರಲ್ಲಿನ ಇವರಿಬ್ಬರ ಭಿನ್ನತೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ದೇಶದ ಅಭಿವೃದ್ಧಿಗೋಸ್ಕರ ಕೈಗೊಂಡ ಕಾರ್ಯಕ್ರಮಗಳು, ಆಲೋಚನೆಗಳನ್ನು ಚರ್ಚಿಸಲು ಪ್ರಯತ್ನಸಲಾಗಿದೆ. ಇವರಿಬ್ಬರ ಆಲೋಚನೆಗಳು ವಿಭಿನ್ನ ದೃಷ್ಟಿಕೋನ ಗಳಿಂದ ಕೂಡಿವೆ. ಅಂದರೆ ಇವರು ಆಲೋಚಿಸಿದ ದೇಶಿಯ ಮತ್ತು ವಿದೇಶಿ ಚಿಂತನೆಯ ನೆಲೆಗಳಿಂದ ದೇಶದ ಪ್ರಗತಿಯನ್ನು ಯಾವ ರೀತಿ ಮಾಡಲು ಸಾಧ್ಯ ಎಂಬುದು. ಇದರಲ್ಲಿ ಗ್ರಾಮ, ಕೃಷಿ, ಶಿಕ್ಷಣ, ಆರೋಗ್ಯ, ಕೈಗಾರಿಕಾ ವಿಷಯಗಳನ್ನು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಮೀಸಲಾತಿಯ ವಿಷಯಗಳಿದ್ದು ಇದರಲ್ಲಿ ಇವರಿಬ್ಬರ ಸಾಮ್ಯತೆಗಳನ್ನು ಗುರುತಿಸಲಾಗಿದೆ. ಇವರಿಬ್ಬರು ಸರ್ಕಾರಿ ಉದ್ಯೋಗದಲ್ಲಿ ನೌಕರಿ ಪಡೆಯಲು ಯೋಗ್ಯತೆ, ದಕ್ಷತೆ, ಪ್ರಾಮಾಣಿಕತೆಗಳನ್ನು ಪ್ರತಿಪಾದಿಸಿದವರು. ಅಲ್ಲದೆ ಪ್ರತ್ಯೇಕ ಮತದಾನದ ಪದ್ಧತಿಯನ್ನು ವಿರೋಧಿಸಿದವರು. ಈ ವಿಚಾರದ ಬಗ್ಗೆ ಒಬ್ಬರು ದೇಶದ ಅಭಿವೃದ್ಧಿಗೆ ಮಾರಕವೆಂದರೆ, ಇನ್ನೊಬ್ಬರು ಹಿಂದೂ ಧರ್ಮದಿಂದ ಮತ್ತು ಇನ್ನುಳಿದ ಹಿಂದೂಗಳಿಂದ ದೂರ ಉಳಿದು ಇನ್ನು ನಿಕೃಷ್ಟವಾಗಿ ಬಾಳುವಂತೆ ಆಗುತ್ತದೆ ಎಂದು ವಾದಿಸಿರುವರು.

ನಾಲ್ಕನೆಯ ಅಧ್ಯಾಯದಲ್ಲಿ ರಾಷ್ಟ್ರ, ರಾಷ್ಟ್ರೀಯತೆ, ದಾಸ್ಯ, ಸ್ವಾತಂತ್ರ್ಯ ಮತ್ತು ದೇಶದ ರಕ್ಷಣೆಯನ್ನು ಕುರಿತದ್ದು. ಈ ವಿಷಯಗಳಲ್ಲಿ ಗಾಂಧಿ ಅವರು ಮುಕ್ತವಾಗಿ ತಮ್ಮ ವಿಚಾರಗಳನ್ನು ಚರ್ಚಿಸಿದ್ದಾರೆ. ಇವರದು ಪ್ರಮುಖವಾಗಿ ಮಾನವೀಯತೆಯ ಚಿಂತನೆ. ಅಲ್ಲದೆ ಭಾರತವು ಬೇರೊಬ್ಬರಿಗೆ (ಬೇರೊಂದು ದೇಶಕ್ಕೆ) ಶೋಷಣೆ ಮಾಡಬಾರದು ಎಂಬ ನಿಲುವು. ದೇಶದ ರಕ್ಷಣೆಯ ವಿಷಯದಲ್ಲೂ ಆಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದಬಾರದೆಂಬ ನಿಲುವು ಗಾಂಧಿ ಅವರದು. ಆದರೆ ವಿಶ್ವೇಶ್ವರಯ್ಯನವರು ಈ ವಿಷಯಗಳ ಬಗ್ಗೆ ಮುಕ್ತವಾಗಿ ಚರ್ಚಿಸಿಲ್ಲ. ಆದ್ದರಿಂದ ಅವರು ಕೈಗೊಂಡ ಕೆಲಸಕಾರ್ಯಗಳು, ನಿರ್ಣಯಗಳನ್ನು ಕುರಿತ ಚಿಂತನೆಗಳಿಗೆ ಆದ್ಯತೆ ಕೊಟ್ಟು ಮೊದಲೆರಡನ್ನು ಪರಿಶೀಲಿಸಲಾಗಿದೆ. ಅಲ್ಲದೆ ಇವರು ದೇಶದ ರಕ್ಷಣೆಯ ವಿಷಯದಲ್ಲಿ ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದುವುದು ಸೂಕ್ತ ಎಂಬ ನಿಲುವನ್ನು ವ್ಯಕ್ತಪಡಿಸಿದ್ದುಂಟು.

ಐದನೆಯ ಅಧ್ಯಾಯದಲ್ಲಿ ಜಾಗತೀಕರಣದ ಪರಿಕಲ್ಪನೆಯನ್ನು ವಿವರಿಸಲಾಗಿದೆ. ಈ ಜಾಗತೀಕರಣದ ಪ್ರಭಾವದಿಂದ ದೇಶದ ಮೇಲೆ ಉಂಟಾಗುತ್ತಿರುವ ಪರಿಣಾಮಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಅಲ್ಲದೆ ಇವರಿಬ್ಬರ ಅಂದಿನ ಚಿಂತನೆಗಳು ಈ ಹೊತ್ತು ಎಷ್ಟು ಪ್ರಸ್ತುತ ಎಂಬುದನ್ನು ವಿಶ್ಲೇಷಿಸಲಾಗಿದೆ. ಅಂತೆಯೇ ಅವುಗಳನ್ನು ಹೇಗೆ ಅಳವಡಿಸಿಕೊಳ್ಳಬೇಕು ಎಂಬುದು ಮುಖ್ಯವಾದುದು. ಒಟ್ಟಾರೆ ಈ ದಿಸೆಯಲ್ಲಿ ಇದೊಂದು ಮೊದಲ ಹಾಗೂ ಕಿರು ಪ್ರಯತ್ನ.

ಅಧ್ಯಾಯ - ೨

# ಸರ್. ಎಂ. ವಿ. ಮತ್ತು ಗಾಂಧಿ : ಪರಿಸರ-ಪ್ರಭಾವ

೨.೧. ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಸಂಕ್ಷಿಪ್ತ ಜೀವನ ಚರಿತ್ರೆ

೨.೨ ಸಮಾಜ ಮತ್ತು ಧಾರ್ಮಿಕ ಪರಿಸರದ ಹಿನ್ನೆಲೆ ಹಾಗೂ ಪ್ರಭಾವ

ಆಂಗ್ಲರು ವ್ಯಾಪಾರಕ್ಕಾಗಿ ಭಾರತಕ್ಕೆ ಬಂದು, ಸುಮಾರು ೨೫೦ ವರ್ಷಗಳವರೆಗೂ ಭಾರತೀಯರನ್ನು ದಾಸ್ಯ ಸಂಕೋಲೆಗೆ ಸಿಲುಕಿಸಿದ್ದರು. ಅವರು ಇಡೀ ಭಾರತವನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡು ಆಳ್ವಿಕೆ ನಡೆಸುತ್ತಿದ್ದ ಕಾಲವದು. ಇಂಥ ಸಂದರ್ಭದಲ್ಲಿ ಅನೇಕ ನಾಯಕರುಗಳು ದಾಸ್ಯ ಸಂಕೋಲೆಯಿಂದ ಮುಕ್ತರಾಗುವುದಕ್ಕೂ, ಮತ್ತು ದೇಶದ ಆರ್ಥಿಕ ಅಭಿವೃದ್ಧಿಯ ಕಡೆಗೂ ಚಿಂತಿಸುತ್ತಿದ್ದುದು ಉಂಟು. ಆದರೆ ಆ ನಿಟ್ಟಿನಲ್ಲಿ ಚಿಂತಿಸಿದವರ ಪೈಕಿ, ೧೯ನೆಯ ಶತಮಾನದಲ್ಲಿ ಜನಿಸಿದ ಗಾಂಧಿ ಮತ್ತು ವಿಶ್ವೇಶ್ವರಯ್ಯನವರ ಪಾತ್ರ ಅತ್ಯಂತ ಪ್ರಧಾನವಾದದ್ದು. ಗಾಂಧಿ ಅವರು ಆಂಗ್ಲರ ದಾಸ್ಯ ಸಂಕೋಲೆಯಿಂದ ಬಿಡುಗಡೆ ಹೊಂದಲು ಆಲೋಚಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದ್ದರು. ಇವರ ಪ್ರವೇಶದಿಂದ ಸ್ವಾತಂತ್ರ್ಯ ಹೋರಾಟವು ಹೊಸ ತಿರುವು ಪಡೆದುಕೊಂಡಿತ್ತು. ಅವರಂತೆ ವಿಶ್ವೇಶ್ವರಯ್ಯನವರು ದೇಶದ ಅಭಿವೃದ್ಧಿಗೆ ಕೈಗೊಂಡ ಕಾರ್ಯಕ್ರಮಗಳು ಹಲವು. ಇವರು ದಿವಾನರಾಗಿ ಯೋಜನೆಗಳನ್ನು ಹಾಕಿದ್ದಲ್ಲದೆ ಅದನ್ನು ಕಾರ್ಯರೂಪಕ್ಕೆ ತಂದವರು. ಇವರಿಬ್ಬರು ಸಂಸ್ಥಾನದ ಮಟ್ಟದಲ್ಲಿ ಹುಟ್ಟಿ ಅಂತರಾಷ್ಟ್ರೀಯ ಮಟ್ಟದವರೆಗೂ ಖ್ಯಾತಿ ಗಳಿಸಿದವರು. ಇವರಿಬ್ಬರು ಅಂದಿನ ಭಾರತದ ಪರಿಸ್ಥಿತಿಯನ್ನು ಚೆನ್ನಾಗಿ ಅರಿತಿದ್ದರು. ಅಲ್ಲದೆ ಇವರಿಬ್ಬರು ಒಂದೇ ದಶಕದಲ್ಲಿ ಜನಿಸಿದ ಸಮಕಾಲೀನರು. ಆದರೆ ವಿಶ್ವೇಶ್ವರಯ್ಯನವರು ಗಾಂಧಿ ಅವರಿಗಿಂತ ಹತ್ತು ವರ್ಷಗಳು ದೊಡ್ಡವರಾಗಿದ್ದರೂ, ಪರಸ್ಪರ ಗೌರವದಿಂದ ಕಾಣುತ್ತಿದ್ದರು. ಈ ಹಿನ್ನೆಲೆಯಲ್ಲಿ ಅವರು ಕೈಗೊಂಡ ಕಾರ್ಯಗಳು, ಚಿಂತನೆಗಳು ಇಂದಿಗೂ ಪ್ರಸ್ತುತ. ಈ ಹಿನ್ನೆಲೆಯಲ್ಲಿ ಇಬ್ಬರ ವ್ಯಕ್ತಿತ್ವಗಳ ಮೇಲೆ ಬೀರಿದ ಪರಿಸರ-ಪ್ರಭಾವಗಳನ್ನು ತೌಲನಿಕವಾಗಿ ಗ್ರಹಿಸುವುದು ಸೂಕ್ತ.

## ೨.೧. ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಸಂಕ್ಷಿಪ್ತ ಜೀವನ ಚರಿತ್ರೆ

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಊರು ಮೈಸೂರು ಸಂಸ್ಥಾನದ ಮುದ್ದೇನಹಳ್ಳಿ. ಇವರು ಹುಟ್ಟಿದ್ದು ೧೮೬೧ರ ಸೆಪ್ಟೆಂಬರ್ ೧೫ ರಂದು. ಇವರ ತಂದೆ ಶ್ರೀನಿವಾಸ ಶಾಸ್ತ್ರಿ, ತಾಯಿ ವೆಂಕಟಲಕ್ಷ್ಮಮ್ಮ. ವಿಶ್ವೇಶ್ವರಯ್ಯನವರಂತೆ ಅಂದಿನ ಇನ್ನೊಂದು ಸಂಸ್ಥಾನವಾದ ಗುಜರಾತಿನ ಕಾಥೇವಾಡದ ಪೋರಬಂದರಿನಲ್ಲಿ ಗಾಂಧಿ ಅವರು ಹುಟ್ಟಿದರು. ಇವರು ಹುಟ್ಟಿದ್ದು ೧೮೬೯ರ

ಅಕ್ಟೋಬರ್ ೨ ರಂದು. ಮೋಹನ್‌ದಾಸ್ ಕರಮಚಂದ ಗಾಂಧಿ ಅವರ ತಂದೆ ಕರಮಚಂದಗಾಂಧಿ, ತಾಯಿ ಪುತಲೀಬಾಯಿ.

ವಿಶ್ವೇಶ್ವರಯ್ಯನವರ ಪ್ರಾಥಮಿಕ ಶಿಕ್ಷಣ ನಡೆದದ್ದು ಚಿಕ್ಕಬಳ್ಳಾಪುರದಲ್ಲಿ. ಹದಿನೈದನೆಯ ವಯಸ್ಸಿನಲ್ಲಿಯೇ ಇವರು ತಮ್ಮ ತಂದೆಯನ್ನು ಕಳೆದುಕೊಂಡರು. ಇಂಥ ಸಮಯದಲ್ಲೇ ಸೋದರ ಮಾವನಾದ ರಾಮಯ್ಯನವರಿಂದ ಆಶ್ರಯ ದೊರೆತದ್ದು. ಹೀಗಾಗಿ ಬೆಂಗಳೂರಿಗೆ ಬಂದು ಅಲ್ಲಿನ ವೆಸ್ಲಿಯನ್ ಮಿಷನ್ ಶಾಲೆಯಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿದರು. ಅನಂತರ ಅವರು ೧೮೮೧ರಲ್ಲಿ ಸೆಂಟ್ರಲ್ ಕಾಲೇಜಿಗೆ ಸೇರಿ ತಮ್ಮ ಬಿ.ಎ.ಪರೀಕ್ಷೆಯನ್ನು ಉನ್ನತ ಶ್ರೇಣಿಯಲ್ಲಿ ಪಾಸು ಮಾಡಿದರು. ಮುಂದಿನ ಉನ್ನತ ಶಿಕ್ಷಣಕ್ಕಾಗಿ ಮುಂಬಯಿಗೆ ತೆರಳಬೇಕಾಯಿತು. ಮುಂಬಯಿ ಪ್ರಾಂತ್ಯದಲ್ಲಿ ೧೮೮೩ರಲ್ಲಿ ಎಲ್.ಸಿ.ಇ. ಮತ್ತು ಇ.ಸಿ.ಇ.ಎಲ್. ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಅಂದು ಮುಂಬೈ ಸರ್ಕಾರವು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದವರಿಗೆ ಉದ್ಯೋಗಗಳನ್ನು ಮೀಸಲಿಟ್ಟಿತ್ತು. ಹೀಗಾಗಿ ೧೮೮೪ರಲ್ಲಿ ಮುಂಬಯಿ ಸರ್ಕಾರದಲ್ಲಿ ಸಹಾಯಕ ಇಂಜಿನಿಯರಾಗಿ ಕೆಲಸಕ್ಕೆ ಸೇರಿಕೊಂಡರು.

ಗಾಂಧಿ ಅವರ ವಿದ್ಯಾಭ್ಯಾಸವು ಸಹ ಸ್ವಲ್ಪಮಟ್ಟಿಗೆ ಏರು ಪೇರಾಗಿತ್ತು. ಏಕೆಂದರೆ ಅವರ ತಂದೆಯು ರಾಜಸಂಸ್ಥಾನದ ದಿವಾನರಾಗಿದ್ದುದರಿಂದ ಬೇರೆ ಬೇರೆ ಸ್ಥಳಗಳಿಗೆ ವರ್ಗವಾಗುತ್ತಿತ್ತು. ಆದರೆ ರಾಜಕೋಟೆಯಲ್ಲಿ ಬಂದು ನೆಲೆಸಿದ ಮೇಲೆ, ವಿದ್ಯಾಭ್ಯಾಸವು ನಿರಂತರವಾಗಿ ಮುಂದುವರಿಯಿತು. ಇಂಥ ಸಮಯದಲ್ಲೇ ವಿಶ್ವೇಶ್ವರಯ್ಯನವರಂತೆ ಗಾಂಧಿಯೂ ಸಹ ತಮ್ಮ ಹದಿನೈದನೆಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಳ್ಳಬೇಕಾಯಿತು. ಇದರಿಂದಾಗಿ ಇವರ ವಿದ್ಯಾಭ್ಯಾಸದ ಭಾರವನ್ನು ಅಣ್ಣನಾದ ಲಕ್ಷ್ಮಿದಾಸ್ ಗಾಂಧಿಯೇ ವಹಿಸಿಕೊಂಡಿದ್ದರು. ಅನಂತರದ ವಿದ್ಯಾಭ್ಯಾಸವನ್ನು ಭಾವನಗರದ ಶ್ಯಾಮಲದಾಸ್ ಕಾಲೇಜಿನಲ್ಲಿ ಮುಗಿಸಿದರು. ಉನ್ನತ ವ್ಯಾಸಂಗಕ್ಕಾಗಿ ೧೮೮೮ರಲ್ಲಿ ಇಂಗ್ಲೆಂಡಿಗೆ ತೆರಳಿ, ೧೮೯೧ರಲ್ಲಿ ಬ್ಯಾರಿಸ್ಟರ್ ವ್ಯಾಸಂಗ ಮುಗಿಸಿ ಭಾರತಕ್ಕೆ ಮರಳಿದರು.

ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ಬಾಲ್ಯದಿಂದಲೂ ವಿದ್ಯಾಭ್ಯಾಸದಲ್ಲಿ ಹೆಚ್ಚು ಆಸಕ್ತಿಯುಳ್ಳವರು. ಶಿಸ್ತು, ಸಮಯ ಪ್ರಜ್ಞೆ, ಗುರು ಹಿರಿಯರನ್ನು ಭಕ್ತಿ, ಗೌರವ ಮತ್ತು ಪೂಜ್ಯಭಾವನೆಯಿಂದ ಕಾಣುತ್ತಿದ್ದರು. ಅಲ್ಲದೇ ಅಂದಿನ ಕಾರ್ಯಚಟುವಟಿಕೆಗಳನ್ನು ಅಂದೇ ಮುಗಿಸಿ ಬಿಡುವ ಸ್ವಭಾವ ಮತ್ತು ಪ್ರವೃತ್ತಿಯವರು. ಮೂಲತಃ ನಾಚಿಕೆ ಸ್ವಭಾವ ಹಾಗೂ ಭಯಪಡುವ ಗುಣ ಗಾಂಧಿ ಅವರದು.

ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರುಗಳು ವೇದಿಕೆಯಲ್ಲಿ ಮೊದಲು ಮಾತನಾಡುವುದಕ್ಕೆ ಹಿಂಜರಿಯುತ್ತಿದುದ್ದುಂಟು. ಗಾಂಧಿ ಇಂಗ್ಲೆಂಡಿನಲ್ಲಿ ಓದುತ್ತಿರುವಾಗ ಭಾಷಣ ಮಾಡುವುದಕ್ಕೆ

ನಾಚಿಕೊಳ್ಳುತ್ತಿದ್ದರು. ಅನಂತರ ದಕ್ಷಿಣ ಆಫ್ರಿಕಾದ ಸ್ವಾತಂತ್ರ್ಯ ಹೋರಾಟದಲ್ಲಿ ಸರಾಗವಾಗಿ ಮಾತನಾಡುವುದನ್ನು, ಭಾಷಣ ಮಾಡುವ ಕಲೆಯನ್ನೂ ಕಲಿತುಕೊಂಡರು. ಅನಂತರದ ದಿನಗಳಲ್ಲಿ ಭಾಷಣ ಮಾಡಲು ಹಿಂಜರಿಯಲಿಲ್ಲ. ಆದರೆ ವಿಶ್ವೇಶ್ವರಯ್ಯನವರು ಭಾಷಣವನ್ನು ಬರೆದುಕೊಳ್ಳದೇ ಮಾತನಾಡುತ್ತಿರಲಿಲ್ಲ. ಅವರು ತಾವು ಮಾತನಾಡುವ ವಿಚಾರಗಳನ್ನು ಒಂದು ಕಾಗದದಲ್ಲಿ ಬರೆದುಕೊಂಡು ಓದುತ್ತಿದ್ದರು. ಅವರು ಎಂದೂ ಬರೆಯದೇ ಭಾಷಣ ಮಾಡಲು ಇಷ್ಟಪಡುತ್ತಿರಲಿಲ್ಲ ಮತ್ತು ಅದು ಅವರಿಗೆ ಸರಿ ಕಾಣುತ್ತಿರಲಿಲ್ಲ. ಒಮ್ಮೆ ಮುದ್ದೇನಹಳ್ಳಿಗೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಶಾಲಾ ವಿದ್ಯಾರ್ಥಿಗಳನ್ನು ಕುರಿತು ಬುದ್ಧಿಮಾತನ್ನು ಹೇಳುವಂತೆ ಉಪಧ್ಯಾಯರೊಬ್ಬರು ಕೇಳಿಕೊಂಡರು. ಒತ್ತಾಯದ ಮೇರೆಗೆ ಅಂದು ಬರೆದುಕೊಳ್ಳದೆ ಮಾತನಾಡಿದ್ದರು. ಆದರೆ ಅದರಿಂದ ತೃಪ್ತರಾಗದೇ ಮತ್ತೊಮ್ಮೆ ಒಂದು ಟಿಪ್ಪಣಿಯನ್ನು ಬರೆದುಕೊಂಡು ಬಂದು ಅದೇ ವಿದ್ಯಾರ್ಥಿಗಳಿಗೆ ಮತ್ತೆ ಬುದ್ಧಿ ಮಾತುಗಳನ್ನು ಹೇಳಿದ್ದುಉಂಟು.

ವಿಶ್ವೇಶ್ವರಯ್ಯ ಮತ್ತು ಗಾಂಧಿ, ಇವರಿಬ್ಬರು ಶಾಕಾಹಾರಿಗಳಷ್ಟೇ ಅಲ್ಲ ಮಿತ ಆಹಾರಿಗಳೂ ಹೌದು. ಆದರೆ ಗಾಂಧಿಯು ಬಾಲ್ಯದಲ್ಲಿ ಸಹವಾಸ ದೋಷದಿಂದ ಮಾಂಸಹಾರ, ಮದ್ಯಸೇವನೆಗಳನ್ನು ಮಾಡಿದ್ದರು. ಅನಂತರ ತಮ್ಮ ತಪ್ಪನ್ನು ತಂದೆಯವರಲ್ಲಿ ಅರಿಕೆ ಮಾಡಿಕೊಂಡು ಮತ್ತೆ ಆ ರೀತಿ ಮಾಡಲು ಬಯಸಲಿಲ್ಲ. ಇವರು ಇಂಗ್ಲೆಂಡಿನಲ್ಲಿದ್ದಂಥ ಸಮಯದಲ್ಲಿ ಆಹಾರದ ಬಗ್ಗೆ ಪ್ರಯೋಗಗಳನ್ನು ನಡೆಸಲಾರಂಭಿಸಿದ್ದರು. ನಂತರದ ದಿನಗಳಲ್ಲಿ ಅದರಲ್ಲಿ ಯಶಸ್ವಿಯೂ ಆದರು. ಅವರು ನೆಲಗಡಲೆ, ಬಾಳೆಕಾಯಿ, ಬಾಳೆಹಣ್ಣು, ನಿಂಬೆಹಣ್ಣು, ಆಲಿವ್‌ಎಣ್ಣೆ, ಟೊಮೋಟೋ ಇವುಗಳನ್ನು ಹೆಚ್ಚಾಗಿ ಸೇವಿಸುತ್ತಿದ್ದರು. ಅಲ್ಲದೆ ಹಸುವಿನ ಹಾಲನ್ನು ಬಿಟ್ಟು ಆಡಿನ ಹಾಲನ್ನು ಕುಡಿಯಲು ಆರಂಭಿಸಿದ್ದರು. ಅವರು ದಿನಕ್ಕೆ ಐದು ಪದಾರ್ಥಗಳನ್ನು ಮಾತ್ರ ತೆಗೆದುಕೊಳ್ಳುತ್ತಿದ್ದರು. ಅವರು ಕತ್ತಲೆಯಾದ ನಂತರ ಊಟ ಮಾಡುತ್ತಿರಲಿಲ್ಲ. ವಿಶ್ವೇಶ್ವರಯ್ಯನವರು ಸಹ ಗಾಂಧಿ ಅವರಂತೆ ಮಿತ ಆಹಾರವನ್ನು ಸೇವಿಸುತ್ತಿದ್ದರು. ಆದರೆ ಅವರಂತೆ ಆಹಾರದ ಬಗ್ಗೆ ಸಂಶೋಧನೆ ಮಾಡಿರಲಿಲ್ಲ. ಆದರೆ ಇವರು ಆಧುನಿಕ ಶೈಲಿಯಲ್ಲಿ ಆಹಾರ ಸೇವನೆ ಮಾಡುತ್ತಿದ್ದರು. ಇವರು ತಮ್ಮ ದಿನಚರಿಯಲ್ಲಿ ನಿರ್ದಿಷ್ಟ ವೇಳೆಗೆ ಊಟ, ಕಾಫಿ, ಉಪಹಾರಗಳನ್ನು ಮಿತವಾಗಿ ತೆಗದುಕೊಳ್ಳುತ್ತಿದ್ದುದ್ದನ್ನು ದಾಖಲಿಸಿದ್ದಾರೆ.

ಗಾಂಧಿ ಅವರಿಗೆ ತಮ್ಮ ಬಾಲ್ಯ ಜೀವನದಲ್ಲೇ ವಿವಾಹವಾಯಿತು. ಅವರಿಗೆ ಹದಿಮೂರು ವರ್ಷ ವಯಸ್ಸಾಗಿದ್ದಾಗ, ಕಸ್ತೂರ ಬಾ ಅವರಿಗೂ ಅಷ್ಟೇ ವಯಸ್ಸು. ಕಸ್ತೂರ ಬಾ ಅನಕ್ಷರಸ್ಥೆಯಾಗಿದ್ದರೂ ಸಾಂಪ್ರದಾಯಿಕ ಮನೆತನದ ಶಿಕ್ಷಣದಿಂದ ಸುಸಂಸ್ಕೃತೆ ಅನ್ನಿಸಿಕೊಂಡಿದ್ದರು. ಗಾಂಧಿ ಏಕ ಪತ್ನಿ ವ್ರತ ಆಚರಿಸಿದವರು. ಇವರ ಕೌಟುಂಬಿಕ ಜೀವನವು ಸುಖಕರವಾಗಿತ್ತು. ಕಸ್ತೂರ ಬಾ ಅವರು ಗಾಂಧಿ ಅವರ ಸೇವೆಗೆ ತಮ್ಮನ್ನು ತಾವು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡರು. ಆದರೆ ವಿಶ್ವೇಶ್ವರಯ್ಯ

ನವರಿಗೆ ಬಾಲ್ಯವಿವಾಹವಾಗಿದ್ದರೂ ಮೂರುಬಾರಿ ವಿವಾಹವಾಯಿತು. ಮೊದಲೆರಡು ಪತ್ನಿಯರು ಹೆರಿಗೆಯ ಸಮಯದಲ್ಲಿ ಮೃತರಾದರು. ಅನಂತರ ತಾಯಿಯ ಒತ್ತಾಯದ ಮೇರೆಗೆ ಮೂರನೇ ಬಾರಿ ವಿವಾಹವಾದರು. ಆದರೆ ಸಂಸಾರದಲ್ಲಿ ಸುಖಕಾಣಲಿಲ್ಲ. ಸೋದರ ಮಾವನ ಸಲಹೆಯ ಮೇರೆಗೆ ಹೆಂಡತಿಯನ್ನು ತೊರೆದು, ಜೀವನಾಂಶಕ್ಕೆ ಬೇಕಾಗುವಷ್ಟು ಹಣವನ್ನು ಆಕೆಗೆ ನೀಡುತ್ತಿದ್ದರು. ಇವರು ಗಾಂಧಿ ಅವರಂತೆ ಎಂದೂ ಸಂಸಾರದಲ್ಲಿ ಸುಖ ಪಡೆಯಲಿಲ್ಲ. ವಿಶ್ವೇಶ್ವರಯ್ಯ ಈ ಕುರಿತು ನೊಂದುಕೊಂಡಿದ್ದರಾದರೂ ಹೆಚ್ಚಿಗೆ ಚಿಂತಿಸಲಿಲ್ಲ. ಬದಲಾಗಿ ಶಿಸ್ತು-ಸಂಯಮಗಳ ಮೂಲಕ ತಮ್ಮನ್ನು ಪ್ರಗತಿಯ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು.

ಗಾಂಧಿಯು ಇಂಗ್ಲೆಂಡಿನಲ್ಲಿ ಬ್ಯಾರಿಸ್ಟರ್ ಪದವಿ ಪಡೆದು ತಾಯ್ನಾಡಿಗೆ ಮರಳಿದರು. ತಾಯಿ ಮೃತಳಾದ ವಿಷಯ ತಿಳಿದು ಹೃದಯ ಕಲಕಿತು. ಅನಂತರ ಅಣ್ಣನಾದ ಲಕ್ಷ್ಮಿದಾಸ್ ಬಾಬು ಇವರನ್ನು ಸಮಧಾನ ಪಡಿಸಿದರು. ಗಾಂಧಿ ತಮ್ಮ ವಕೀಲ ವೃತ್ತಿಯನ್ನು ಮುಂಬಯಿನಲ್ಲಿ ಆರಂಭಿಸಿದರೂ ಯಶಸ್ವಿ ಆಗಿರಲಿಲ್ಲ. ಹೀಗಾಗಿ ತಮ್ಮ ಕಾರ್ಯಾಲಯವನ್ನು ರಾಜಕೋಟೆಗೆ ವರ್ಗಾಯಿಸಿದರು. ಆದರೆ ಅಲ್ಲಿ ಒಬ್ಬ ಆಂಗ್ಲ ಅಧಿಕಾರಿಯಿಂದ ಅವಮಾನಗೊಂಡರು. ಇದರಿಂದ ತಮ್ಮ ಸ್ವಾಭಿಮಾನ ಕೆರಳಿತು. ಆದರೆ ಫಿರೋಜ್‌ಷಹ ಮೆಹ್ತಾ ಅವರು ಸಮಧಾನ ಪಡಿಸಿ ಭಾರತದ ದಾಸ್ಯ ಪರಿಸ್ಥಿತಿಯನ್ನು ವಿವರಿಸಿದರು. ನಂತರ ತಮ್ಮ ವಕೀಲಿ ವೃತ್ತಿಯಲ್ಲಿ ಯಶಸ್ವಿ ಆದದ್ದು ದಕ್ಷಿಣ ಆಫ್ರಿಕಾದಲ್ಲಿಯೇ. ದಾದಾ ಅಬ್ದುಲ್ಲಾರು ತಮ್ಮ ಸಹಾಯಕ್ಕೆ ಗಾಂಧಿ ಅವರನ್ನು ದಕ್ಷಿಣ ಆಫ್ರಿಕಾಕ್ಕೆ ಕರೆದುಕೊಂಡರು. ದಕ್ಷಿಣ ಆಫ್ರಿಕಾದಲ್ಲಿದ್ದಂಥ ವರ್ಣಭೇದ ನೀತಿಗೆ ಗಾಂಧಿ ಅವರು ಸಹ ಸಿಕ್ಕಿಬಿದ್ದರು. ಅಲ್ಲಿ ಭಾರತೀಯರನ್ನು ನಿಕೃಷ್ಟವಾಗಿ ಕಾಣಲಾಗುತ್ತಿತ್ತು. ಇದರಿಂದ ಗಾಂಧಿಯು ತಮ್ಮ ವಕೀಲಿ ವೃತ್ತಿಯ ಕಡೆಗೆ ಗಮನವನ್ನು ಹರಿಸಲು ಸಾಧ್ಯ ಆಗಲಿಲ್ಲ. ಬದಲಾಗಿ ಸಮಾಜ ಸುಧಾರಣೆಯಂಥ ಕೆಲಸಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಅನಂತರ 'ನಿಟಾಲ್ ಇಂಡಿಯನ್ ಕಾಂಗ್ರೇಸ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಆ ಮೂಲಕ ಭಾರತೀಯರಿಗೆ ನ್ಯಾಯ ದೊರಕಿಸಿಕೊಡಲು ಚಳವಳಿಯನ್ನೇ ಆರಂಭಿಸಿದರು.[೭] ಇದಕ್ಕೆ ಮುಖ್ಯಕಾರಣ ಭಾರತೀಯರಿಗೆ ಮತದಾನದ ಹಕ್ಕನ್ನು ನಿರಾಕರಿಸಿದ್ದುದು. ಗಾಂಧಿ ಅವರು ಅಲ್ಲಿ ನೀಡುತ್ತಿದ್ದ ಹಿಂಸೆಗಳನ್ನು ಸಹಿಸಿಕೊಳ್ಳುತ್ತಿದ್ದುದಲ್ಲದೇ ಕೋಪವನ್ನೂ ಮಾಡಿಕೊಳ್ಳುತ್ತಿರಲಿಲ್ಲ. ಇದಕ್ಕೆ ಅವರು ಅಳವಡಿಸಿಕೊಂಡಿದ್ದ ಸಹನೆ, ಸಂಯಮ, ಕ್ಷಮಿಸುವ ಗುಣ, ಸತ್ಯತೆಗಳೆ ಕಾರಣ. ಅಲ್ಲದೆ ಧರ್ಮಶಾಸ್ತ್ರಗಳ ಪ್ರಭಾವ ಮತ್ತು ರಸ್ಕಿನ್‌ನ ಬರಹಗಳು ಪ್ರಮುಖವು. ಇವೆಲ್ಲವುಗಳ ಪರಿಣಾಮವಾಗಿ ಸತ್ಯ-ಅಹಿಂಸೆ, ಸತ್ಯಾಗ್ರಹಗಳನ್ನು ಆಚರಿಸಿ ದಕ್ಷಿಣ ಆಫ್ರಿಕಾದ ಚಳವಳಿಯಲ್ಲಿ ಯಶಸ್ವಿಯಾದರು. ಇದೇ ರೀತಿಯ ಚಳವಳಿಗಳನ್ನು ಭಾರತಕ್ಕೆ ಬಂದ ಮೇಲೂ ಮುಂದವರೆಸಿದ್ದರು. ಇಲ್ಲಿಯೂ ಯಶಸ್ವಿಯಾಗಿ ಆಂಗ್ಲರ ದಾಸ್ಯದಿಂದ ಭಾರತೀಯರು ೧೯೪೭ರ

ಆಗಸ್ಟ್ ೧೫ರಂದು ಸ್ವತಂತ್ರರಾಗಲು ಕಾರಣರಾದರು. ೧೯೪೮ರ ಜನವರಿ ೩೦ರಂದು ತಮ್ಮ ಕೊನೆಯುಸಿರನ್ನೆಳೆದರು.

ವಿಶ್ವೇಶ್ವರಯ್ಯನವರು ಮುಂಬಯಿಯಲ್ಲಿ ಎಂಜಿನಿಯರ್ ಪದವಿ ಪಡೆದು, ಅಲ್ಲಿನ ಸರ್ಕಾರದಲ್ಲಿ ಎಂಜಿನಿಯರಾಗಿ ಕೆಲಸಕ್ಕೆ ಸೇರಿದ್ದರು. ಅಲ್ಲಿ ನಡೆಸಿದ ಜೀವನವು ಅವರಲ್ಲಿ ಕೆಲವೊಂದು ಬದಲಾವಣೆಗಳಿಗೆ ಕಾರಣವಾಯಿತು. ಇವರು ಮುಂಬಯಿ ಪ್ರಾಂತ್ಯದಲ್ಲಿ ಇಪ್ಪತ್ತಾನಾಲ್ಕು ವರ್ಷಗಳಿದ್ದರು. ಹದಿನಾಲ್ಕು ವರ್ಷವನ್ನು ಪೂನಾದಲ್ಲೇ ಕಳೆದಿದ್ದರು.[೩] ಈ ಸಂದರ್ಭದಲ್ಲಿ ಪೂನಾವು ಭಾರತೀಯ ಸ್ವಾತಂತ್ರ್ಯ ಚಳುವಳಿಯ ಪ್ರಮುಖ ತಾಣವಾಗಿತ್ತು. ಇಲ್ಲಿನ ಪ್ರಮುಖ ನಾಯಕರೆನಿಸಿದ್ದ ಮಹಾದೇವ ಗೋವಿಂದ ರಾನಡೆ, ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕ್, ಕೇಳ್ಕರ್ ಮೊದಲಾದವರ ಸ್ನೇಹವಾಯಿತು. ಇವರುಗಳು ಭಾರತದ ಸ್ವಾತಂತ್ರ್ಯ ಚಳವಳಿಯ ಮುಂಚೂಣಿಯಲ್ಲಿದ್ದವರು. ವಿಶ್ವೇಶ್ವರಯ್ಯ ಅವರು ಸ್ವಾತಂತ್ರ್ಯ ಚಳವಳಿಯಲ್ಲಿ ನೇರವಾಗಿ ಭಾಗವಹಿರಲಿಲ್ಲ. ಆದರೆ ಪೂನಾದಲ್ಲಿದ್ದಾಗ ಅನೇಕ ಸಂಘಸಂಸ್ಥೆಗಳ ಸ್ಥಾಪನೆಗೆ ಕಾರಣರಾಗಿದ್ದರು. ಈ ನಾಯಕರುಗಳ ಜೊತೆಗೂಡಿ ಮುಂಬಯಿಯಲ್ಲಿ ಡರ್ಕ್‌ಕ್ಲಬ್‌ನ್ನು ಸ್ಥಾಪಿಸಿ, ದೇಶದ ಪರಿಸ್ಥಿತಿಗಳನ್ನು ಚರ್ಚಿಸುತ್ತಿದ್ದರು.[೪] ಅಲ್ಲದೆ ವಿಶ್ವೇಶ್ವರಯ್ಯನವರು ಅಂದಿನ ಭಾರತದ ಆರ್ಥಿಕತೆಯ ಬಗ್ಗೆ ಚಿಂತಿಸತೊಡಗಿದ್ದೇ ಹೆಚ್ಚು. ದೇಶ ಆರ್ಥಿಕಾಭಿವೃದ್ಧಿ ಹೊಂದುವುದರ ಜೊತೆಗೆ ಸ್ವಾತಂತ್ರ್ಯ ಪಡೆಯುವುದು ಸಹ ಪ್ರಧಾನವೆಂಬುದು ಅವರ ಆಶಯ. ಆದರೆ ತಮ್ಮನ್ನು ಮಾತ್ರ ನೇರವಾಗಿ ಚಳವಳಿಗೆ ತೊಡಗಿಸಿಕೊಂಡಿರಲಿಲ್ಲ.

ಮೂಲತಃ ಇಂಜಿನಿಯರ್ ಆಗಿದ್ದ ವಿಶ್ವೇಶ್ವರಯ್ಯ ಅವರಿಗೆ ಸ್ವಾಭಾವಿಕವಾಗಿ ವಿದೇಶಿಗಳಲ್ಲಿನ ಅಭಿವೃದ್ಧಿಯ ವೇಗ ಕಾಡಿತ್ತು. ಅವರು ವಿದೇಶಗಳಿಗೆ ಭೇಟಿ ಕೊಡುತ್ತಿದ್ದ ಸಮಯದಲ್ಲಿ ಅವುಗಳ ಅಭಿವೃದ್ಧಿಯ ಧಾಟಿಯನ್ನು ಕುರಿತು ಚಿಂತನೆ ನಡೆಸಿದ್ದರು. ಅವರು ೧೮೯೮ರಲ್ಲೇ ಜಪಾನ್‌ಗೆ ಭೇಟಿ ನೀಡಿದ್ದರು. ಅಂದು ಅದು ಎಲ್ಲ ರೀತಿಯಿಂದಲೂ ಪ್ರಗತಿಯನ್ನು ಸಾಧಿಸಿತ್ತು. ಇದರ ಪ್ರಭಾವ ಅವರ ಮೇಲೆ ಬೀರದೆ ಇರಲಿಲ್ಲ. ಅಲ್ಲಿಂದ ಮೈಸೂರು ಸಂಸ್ಥಾನಕ್ಕೆ ಬಂದು ಚೀಫ್ ಇಂಜನಿಯರಾಗಿ ಅನಂತರ ದಿವಾನರಾಗಿ ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿಗೊಳ್ಳುವಂತೆ ಯೋಜನೆಗಳನ್ನು ರೂಪಿಸಿ ಅವುಗಳಲ್ಲಿ ಯಶಸ್ವಿಯಾದರು. ಇವರ ಶಿಸ್ತು, ಕಾರ್ಯದಕ್ಷತೆಗಳು ಆಂಗ್ಲರನ್ನು 'ಸರ್' ಎಂಬಂಥ ಮೆಚ್ಚುಗೆಯ ಬಿರುದುಗಳನ್ನು ನೀಡಿ ಗೌರವಿಸುವಂತೆ ಮಾಡಿದ್ದವು. ೧೯೬೨ರ ಏಪ್ರಿಲ್ ೧೪ರಂದು ವಿಶ್ವೇಶ್ವರಯ್ಯನವರು ಮರಣ ಹೊಂದಿದರು.

ಗಾಂಧಿ ಅವರು ತಮ್ಮ ಜೀವನದ ಕೆಲವೊಂದು ಘಟನೆಗಳನ್ನು, ತಾವು ಹುಡುಕುತ್ತಿದ್ದ ಸತ್ಯವನ್ನು ಬರೆಯಲು ಪ್ರಾರಂಭಿಸಿದರು. ತಮ್ಮ ಆತ್ಮಕಥೆಗೆ 'ನನ್ನ ಸತ್ಯಾನ್ವೇಷಣೆ' [ಸತ್ಯಶೋಧನೆ] ಎಂದು ಹೆಸರಿಟ್ಟರು. ಇದು ಪೂರ್ಣಗೊಂಡಿಲ್ಲ. ಆದರೆ ಇದರಲ್ಲಿ ತಮ್ಮ ಎಲ್ಲ ಘಟನೆಗಳನ್ನು

ವಿವರಿಸಿದ್ದಾರೆ. ಅಲ್ಲದೆ 'ಹಿಂದ್ ಸ್ವರಾಜ್ಯ' ಮತ್ತು 'ಸರ್ವೋದಯ' ಎಂಬ ಕೃತಿಗಳನ್ನು ಬರೆದಿದ್ದಾರೆ. ಇದರಲ್ಲಿ ಭಾರತವು ಯಾವ ದಿಶೆಯಲ್ಲಿ ಪ್ರಗತಿಯನ್ನು ಹೊಂದಬೇಕು ಎಂದು ಆಲೋಚಿಸಿದ್ದಾರೆ. ಆದರೆ ವಿಶ್ವೇಶ್ವರಯ್ಯನವರ ಆತ್ಮಕಥೆಯು ಇವರಿಗಿಂತ ಭಿನ್ನವಾಗಿದೆ. ಇವರು ಬರೆದ ಆತ್ಮಕಥನ 'MEMOIRS OF MY WORKING LIFE' [ನನ್ನ ಉದ್ಯೋಗ ಜೀವನದ ನೆನಪುಗಳು] ಎಂಬುದು. ಇದರಲ್ಲಿ ಕೆಲವೊಂದು ಘಟನೆಗಳನ್ನು ಮಾತ್ರ ವಿವರಿಸಿದ್ದಾರೆ. ಆದರೆ ದೇಶದ ಅಭಿವೃದ್ಧಿಗೋಸ್ಕರ Planned Economy for India, Rural Industrialisation in India, ಮತ್ತು Unemployment for India its casues and cure ಇನ್ನು ಮುಂತಾದ ಪುಸ್ತಕಗಳನ್ನು ಬರೆದಿದ್ದಾರೆ(ಅನುಬಂಧದಲ್ಲಿ ನಮೂದಿಸಲಾಗಿದೆ).

## ೨.೨ ಸಮಾಜ ಮತ್ತು ಧಾರ್ಮಿಕ ಪರಿಸರದ ಹಿನ್ನೆಲೆ ಹಾಗೂ ಪ್ರಭಾವ

ಭಾರತದಲ್ಲಿ ಪುರಾತನ ಕಾಲದಿಂದಲೂ ಜಾತಿ ವ್ಯವಸ್ಥೆಯಂಥ ಸಾಮಾಜಿಕ ಹಿನ್ನೆಲೆ ಪ್ರಬಲವಾಗಿತ್ತು. ಅಂದಿನ ಜಾತಿವ್ಯವಸ್ಥೆಯು ಹಿಂದುಳಿದ-ಜಾತಿವರ್ಗಗಳಿಗೆ, ಅದರಲ್ಲೂ ಅಸ್ಪೃಶ್ಯರಿಗೆ ಸರಿಯಾದ ಶಿಕ್ಷಣ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿರಲಿಲ್ಲ. ಆದರೆ ಗಾಂಧಿ ಮತ್ತು ವಿಶ್ವೇಶ್ವರಯ್ಯನವರು ಶಿಕ್ಷಣ ಪಡೆಯುವುದರಲ್ಲಿ ಹೆಚ್ಚಿನ ತೊಂದರೆಗಳಿಗೆ ಒಳಗಾದವರಲ್ಲ. ಏಕೆಂದರೆ ಇವರಿಬ್ಬರು ಸಾಮಾಜಿಕವಾಗಿ ಅಂದು ಉನ್ನತ ಜಾತಿವ್ಯವಸ್ಥೆಯಲ್ಲೇ ಹುಟ್ಟಿದ್ದವರು. ಹೀಗಾಗಿ ಕೆಳಜಾತಿಗಳವರಿಗೆ ಇದ್ದ ತೊಡಕುಗಳಿಂದ ಮುಕ್ತರಾಗಿದ್ದರು. ವಿಶ್ವೇಶ್ವರಯ್ಯನವರ ತಂದೆ ಸಂಸ್ಕೃತ ಮತ್ತು ಆಯುರ್ವೇದಿಕ್ ಪಂಡಿತರಾಗಿದ್ದರು.೪ ವಿಶ್ವೇಶ್ವರಯ್ಯನವರ ಕುಟುಂಬ ಅಂಥ ಶ್ರೀಮಂತವಾದುದಲ್ಲ. ಬದಲಾಗಿ ಬಡತನದಿಂದ ಕೂಡಿತ್ತು. ಇದರಿಂದ ವಿಶ್ವೇಶ್ವರಯ್ಯನವರಿಗೆ ಶಿಕ್ಷಣ ಪಡೆಯುವಲ್ಲಿ ಸ್ವಲ್ಪ ತೊಂದರೆಯಾಗಿತ್ತು. ಆದರೆ ವಿದ್ಯಾರ್ಥಿ ವೇತನಗಳನ್ನು ಪಡೆದು ಉನ್ನತ ಶಿಕ್ಷಣವನ್ನು ಮುಂದುವರೆಸಿದ್ದರು. ಆದರೆ ಗಾಂಧಿ ಅವರ ಮನೆತನದವರು ರಾಜನ ಅಸ್ಥಾನಗಳಲ್ಲಿ ದಿವಾನರಾಗಿದ್ದವರು. ಅದರಲ್ಲೂ ಅವರ ತಂದೆಯು ಸಹ ರಾಜಾಶ್ರಯದಲ್ಲಿ ದಿವಾನ್ ಆಗಿದ್ದರು. ಹೀಗಾಗಿ ಅವರ ಕುಟುಂಬವು ಇಡೀ ಗುಜರಾತಿಯಲ್ಲಿಯೇ ಶ್ರೀಮಂತವೆನ್ನಿಸಿಕೊಂಡಿತ್ತು. ಗಾಂಧಿ ಅವರಿಗೆ ವಿಶ್ವೇಶ್ವರಯ್ಯನವರಂತೆ ಶಿಕ್ಷಣ ಪಡೆಯುವಲ್ಲಿ ಯಾವುದೇ ತೊಂದರೆಯಾಗಿರಲಿಲ್ಲ.

ಗಾಂಧಿ ಹಿಂದೂ ಧಾರ್ಮಿಕ ಪದ್ಧತಿಯ ಆಚರಣೆಗಳನ್ನು ಅನುಸರಿಸುತ್ತಿದ್ದರು. ಇವರಿಗೆ ದೇವರಲ್ಲಿ ನಂಬಿಕೆ ಇತ್ತು. ಪ್ರತಿ ಸೋಮುವಾರ ತಪ್ಪದೇ ಮೌನವ್ರತವನ್ನು ಆಚಾರಿಸುತ್ತಿದುದ್ದುಂಟು. ರಾಮ ಮತ್ತು ಈಶ್ವರ ಗಾಂಧಿ ಅವರ ಆರಾಧ್ಯ ದೈವಗಳು. ಗಾಂಧಿಯು ನನಗೆ ಕಷ್ಟಕಾಲದಲ್ಲಿ ನೆರವು ನೀಡಿದವರೇ ದೇವರು ಎನ್ನುತ್ತಿದ್ದರು. 'ಧರ್ಮ' ಎಂದರೆ ಆತ್ಮಸಾಕ್ಷಾತ್ಕಾರ, ಆತ್ಮಜ್ಞಾನ ಎಂಬುದು ಇವರ ಅರ್ಥಗ್ರಹಿಕೆ. ಇವರು ಹಿಂದು ಧರ್ಮದ ಶ್ಲೋಕಗಳನ್ನು ಬಾಯಿಪಾಠ ಮಾಡಿ

ಸ್ತುತಿಸುತ್ತಿದ್ದುದುಂಟು. ಇಂಗ್ಲೆಂಡಿನಲ್ಲಿದ್ದಂಥ ಸಮಯದಲ್ಲಿ ಎಡ್ವಿನ್ ಆರ್ನಾಲ್ಡ್‌ರು ಭಾಷಾಂತರಿಸಿದ್ದ ಭಗವದ್ಗೀತೆಯ ಪರಿಚಯವಾಯಿತು. ಇದನ್ನು ಇಂಗ್ಲೀಷಿನಲ್ಲಿ 'ದಿ ಸಾಂಗ್ ಸೆಲೆಸ್ಟಿಯಲ್' ಎಂದು ಹೆಸರಿಸಲಾಗಿತ್ತು.[೫] ಇದು ಅವರ ಮನಸ್ಸಿನ ಮೇಲೆ ಗಾಢವಾದ ಪ್ರಭಾವ ಬೀರಿ ಮೂಲಕೃತಿಯನ್ನೇ ಓದುವಂತೆ ಪ್ರೇರಣೆ ನೀಡಿತ್ತು. ಗಾಂಧಿಯು ತಮ್ಮ ಧಾರ್ಮಿಕತೆಯ ಬಗ್ಗೆ-

> "ನಾನು ಸಾರ್ವಜನಿಕ ಜೀವನವನ್ನು ಅರಿತನಂತರ, ನಾನು ಆಡಿರುವ ಪ್ರತಿಯೊಂದು ಮಾತು ಮತ್ತು ಮಾಡಿರುವ ಪ್ರತಿಯೊಂದು ಕಾರ್ಯದ ಹಿಂದೆಯೂ, ಧಾರ್ಮಿಕ ಭಾವನೆಯ ಜಾಗ್ರತಿ ಮತ್ತು ಸ್ಪಷ್ಟವಾದ ಧಾರ್ಮಿಕ ಉದ್ದೇಶವೇ ಇದೆ. ನನ್ನ ಮಾತುಗಳನ್ನು ಕೇಳಿದ ಶ್ರೋತೃಗಳಿಗೆ ಅಥವಾ ನನ್ನ ಬರಹವನ್ನು ಓದುವ ವಾಚಕನಿಗೆ, ಅವು ರಾಜಕೀಯ ಆರ್ಥಿಕ ಅಥವ ಬೇರೆ ಬಗೆಯಾಗಿ ಕಂಡಿರಬಹುದು. ಆದರೆ ನಾನು ನಿಮ್ಮಲ್ಲಿ ಇಷ್ಟನ್ನು ಕೇಳಿಕೊಳ್ಳುತ್ತೇನೆ ನನ್ನ ಪ್ರತಿಯೊಂದು ಕಾರ್ಯದ ಹಿಂದೆ ಇರುವ ನನ್ನ ಉದ್ದೇಶ, ಮೂಲತಃ ಮತ್ತು ಪ್ರಾಮುಖ್ಯವಾಗಿ ಧಾರ್ಮಿಕವಾದುದೆ"[೬]

-ಎಂದು ಹೇಳಿದ್ದಾರೆ. ಇದರಿಂದ ಅವರು ಧರ್ಮವನ್ನು ಎಷ್ಟು ಮೈಗೂಡಿಸಿಕೊಂಡಿದ್ದರು ಮತ್ತು ಅದರ ಪ್ರಭಾವ ಯಾವರೀತಿ ಇತ್ತು ಎಂಬುದು ತಿಳಿದುಬರುತ್ತದೆ. ಅವರು ಗೋವುಗಳ ಹತ್ಯೆಯನ್ನು ಖಂಡಿಸುತ್ತಿದುದ್ದುಂಟು. ಇವರದು ಧಾರ್ಮಿಕ ಮನೋಭಾವ. ಹಿಂದೂ ಧರ್ಮದ ಗ್ರಂಥಗಳಂತೆ ಬೈಬಲ್‌ನ ಹಳೆಯ ಮತ್ತು ಹೊಸ ಒಡಂಬಡಿಕೆಗಳನ್ನು ಓದಿ ಅರ್ಥೈಸಿಕೊಂಡಿದ್ದರು. ಕುರಾನಿನ ಒಳ್ಳೆಯ ಅಂಶಗಳನ್ನು ತಿಳಿದಿದ್ದರು. ಅಲ್ಲದೆ ಎಲ್ಲ ಧಾರ್ಮಿಕ ಗ್ರಂಥಗಳನ್ನು ಓದಿ ಅರ್ಥ ಮಾಡಿಕೊಂಡು, ಅದರಲ್ಲಿರುವ ಒಳ್ಳೆಯ ಅಂಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುತ್ತಿದ್ದುಂಟು. ಇಂಥವು ಅವರಲ್ಲಿ ಸತ್ಯ-ಅಹಿಂಸೆ, ಸತ್ಯಗ್ರಹಗಳನ್ನು ಆಚರಿಸಲು ಪ್ರೇರಣೆ ನೀಡಿದ್ದವು.

ವಿಶ್ವೇಶ್ವರಯ್ಯ ಅವರು ಸಹ ಆಚಾರ ಶೂನ್ಯರಾಗಿರಲಿಲ್ಲ. ಇವರಿಗೂ ದೇವರಲ್ಲಿ ಭಯ, ಭಕ್ತಿ, ಶ್ರದ್ಧೆ, ಪೂಜ್ಯಭಾವನೆಗಳಿದ್ದವು. ದೇವಾಲಯಕ್ಕೆ ಹೋಗದೆ ಮನಸ್ಸಿನಲ್ಲಿಯೇ ದೇವರನ್ನು ಸ್ತುತಿಸುತ್ತಿದ್ದರು. ಇವರು ದೇವಸ್ಥಾನಕ್ಕೆ ಹೋಗಬೇಕಾದರೆ "ಕೈಕಾಲುಗಳನ್ನು ತೊಳೆದುಕೊಳ್ಳಿ, ಅಲ್ಲಿ ತೆಂಗಿನಕಾಯಿ ಸಿಪ್ಪೆ, ಹೂವುಗಳನ್ನು ಹರಡಬೇಡಿ, ಬದಲಾಗಿ ಅದನ್ನು ಒಂದು ಮೂಲೆಯಲ್ಲಿ ಹಾಕಿ ನಂತರ ಹೊರಗಡೆ ತೆಗೆದುಕೊಂಡು ಹಾಕಿ" ಎಂದೆಲ್ಲಾ ಹೇಳುತ್ತಿದ್ದುದುಂಟು. ದೇವಾಲಯಗಳನ್ನು ಶುಚಿಯಾಗಿಡಬೇಕು ಎಂಬುದು ಅವರ ನಿಲುವು. ಭಾರತದಲ್ಲಿ ದೇವಾಲಯಗಳಿಗೆ ಬರವಿಲ್ಲ. ಆದರೆ ಅಲ್ಲಿ ನಡೆಯುವ ಜಾತ್ರೆಗಳ ಸಮಯದಲ್ಲಿ ಲಕ್ಷಾಂತರ ಜನರು ಸೇರುತ್ತಾರೆ. ಆ ಸಮಯದಲ್ಲೇ ರೋಗಗಳು ಹರಡುವುದು. ಏಕೆಂದರೆ ಭಾರತೀಯರು ನದಿಗಳನ್ನು ಪವಿತ್ರವೆಂದು ಭಾವಿಸುವುದುಂಟು. ಆದರೆ ದೇವಾಲಯಕ್ಕೆ ಬರುವಂತಹ ಭಕ್ತಾದಿಗಳು ನದಿಯ ದಡದಲ್ಲಿಯೇ ಮಲ ವಿಸರ್ಜನೆ ಮತ್ತು ಉಗುಳುವುದನ್ನು ಮಾಡುತ್ತಾರೆ. ಅಲ್ಲದೆ ಅದೇ ನೀರನ್ನು ಬಳಸುವುದುಂಟು. ಇದಕ್ಕಿಂತ ಮುಖ್ಯವಾಗಿ ದೇವಸ್ಥಾನಕ್ಕೆ ಬರುವಂತಹ ಭಿಕ್ಷುಕರು ಹೆಚ್ಚಾಗಿ ರೋಗಿಗಳೇ ಆಗಿದ್ದಾರೆ. ಈ ಹಿನ್ನೆಲೆಯಲ್ಲಿ ರೋಗಗಳು ಪ್ರಮುಖವಾಗಿ ದೇವಾಲಯಗಳಿಂದಲೇ ಹರಡುತ್ತವೆ. ಜನರು ತಮ್ಮ ಆರೋಗ್ಯ ಮತ್ತು

ನೈರ್ಮಲ್ಯದ ಕಡೆಗೆ ಹೆಚ್ಚಿನ ಗಮನ ಹರಿಸಬೇಕು ಎಂದು ವಿಶ್ವೇಶ್ವರಯ್ಯ ಅವರು ಆಲೋಚಿಸುತ್ತಿದ್ದರು. ಅವರು ದೇವಸ್ಥಾನದ ಮತ್ತು ನದಿಗಳನ್ನು ಶುಚಿಯಾಗಿಟ್ಟುಕೊಳ್ಳಬೇಕೆಂದು ಮನವಿ ಮಾಡುತ್ತಿದ್ದರು. ವಿಶ್ವೇಶ್ವರಯ್ಯ ಅವರಲ್ಲಿ ವಿದೇಶಿ ಪ್ರಭಾವಗಳಿದ್ದರೂ ಸಹ ಸಂಪ್ರದಾಯಗಳ ವಿಷಯದಲ್ಲಿ ಹೆಚ್ಚು ಚಿಂತಿಸಿದವರಲ್ಲ. ಅಂತೆಯೇ ಪೂಜೆ-ಪುನಸ್ಕಾರ, ಆಚಾರಣೆಗಳಲ್ಲೂ ಸಮಯ ಪೋಲು ಮಾಡುವುದನ್ನು ಸಹಿಸಿಕೊಳ್ಳುತ್ತಿರಲಿಲ್ಲ.

ಗಾಂಧಿಯವರಿಗೆ ಪ್ರಮುಖವಾಗಿ ಪ್ರಭಾವ ಬೀರಿದ ಮೂರು ಕೃತಿಗಳು ರಸ್ಕಿನ್ನನ 'ಅನ್ ಟೂ ದಿಸ್‌ಲಾಸ್ಟ್', ಟಾಲ್‌ಸ್ಟಾಯ್‌ರ 'ದಿ ಕಿಂಗ್ ಡಂ ಆಫ್ ದಿ ಗಾಡ್ ವಿಧಿ ಯೂ', ಮತ್ತು ಬೈಬಲ್‌ನ ಹಳೆಯ ಮತ್ತು ಹೊಸ ಒಡಂಬಡಿಕೆಯ ಏಸುವಿನ 'ಪರ್ವತ ಪ್ರಸಂಗ' [ಸರ್ಮನ್ ಆನ್ ದಿ ಮೌಂಟ್]. ಇವುಗಳು ಗಾಂಧಿ ಅವರ ಮೇಲೆ ಗಾಢವಾದ ಪ್ರಭಾವ ಬೀರಿದವು. ಇವುಗಳು ಅವರ ಮನಸ್ಸನ್ನು ಕರಗಿಸಿ ಸತ್ಯದ ಜೊತೆಗೆ ಅಹಿಂಸಾ ತತ್ತ್ವವನ್ನು ಅಳವಡಿಸಿಕೊಳ್ಳುವಲ್ಲಿ ಸಹಕರಿಸಿವೆ.

ಅಂತೆಯೆ ವಿಶ್ವೇಶ್ವರಯ್ಯನವರ ಸಾರ್ವಜನಿಕ ಜೀವನದಲ್ಲಿ ಇಬ್ಬರು ವ್ಯಕ್ತಿಗಳು ಹೆಚ್ಚಿನ ಪ್ರಭಾವವನ್ನು ಬೀರಿದ್ದರು. ಅವರೆ ಮಹಾದೇವ ಗೋವಿಂದ ರಾನಡೆ ಹಾಗೂ ಗೋಪಾಲಕೃಷ್ಣ ಗೋಖಲೆ. ಅವರಲ್ಲಿದ್ದ ಪ್ರಮಾಣಿಕತೆ, ದಕ್ಷತೆ, ಶಿಸ್ತು, ಸಂಯಮ, ಸಮಯ ಪ್ರಜ್ಞೆಗಳು ಗಮನಸೆಳೆದಿದ್ದವು. ಅಲ್ಲದೆ ಇವರು ಮುಂಬಯಿ ಪ್ರಾಂತ್ಯದಲ್ಲಿ ಪಡೆದಿದ್ದ ಸಾರ್ವಜನಿಕವಾದ ಗೌರವ ಹಾಗೂ ಆಂಗ್ಲರ ವಿರುದ್ಧವಾಗಿ ಧೈರ್ಯದಿಂದ ಶಾಂತಿ ರೀತಿಯಲ್ಲಿ ಹೋರಾಡುತ್ತಿದ್ದ ಬಗೆ ವಿಶ್ವೇಶ್ವರಯ್ಯನವರ ಮೇಲೆ ಪ್ರಭಾವ ಬೀರದೆ ಇರಲಿಲ್ಲ.

ಅದೇ ರೀತಿಯಲ್ಲಿ ಗಾಂಧಿ ಅವರ ಜೀವನದಲ್ಲೂ ಮೂರು ವ್ಯಕ್ತಿಗಳು ಹೆಚ್ಚಿನ ಪ್ರಭಾವ ಬೀರಿದ್ದರು. ಅವರ ಮಾತುಗಳಲ್ಲಿಯೇ ಹೇಳುವುದಾದರೆ, ಅವರು-

> "ಸರ್ ಫಿರೋಜ್ ಷಹ ನನಗೆ ಹಿಮಾಲಯದಂತೆ ತೋರಿದರೆ, ಲೋಕಮಾನ್ಯ ತಿಲಕರು ಸಮುದ್ರದಂತೆ, ಆದರೆ ಗೋಖಲೆ ಗಂಗಾನದಿ, ಹಿಮಾಲಯವನ್ನು ಏರುವುದು ಕಷ್ಟ, ಸಮುದ್ರದಲ್ಲಿ ಹೋಗುವುದು ಸುಲಭವಲ್ಲ, ಆದರೆ ಗಂಗಾನದಿ ಜನರನ್ನು ತನ್ನ ಹೃದಯಕ್ಕೆ ಆಹ್ವಾನಿಸುತ್ತದೆ"[೭]

-ಎಂದಿದ್ದಾರೆ. ಗಾಂಧಿ ಗೋಖಲೆ ಅವರನ್ನು ತಮ್ಮ 'ರಾಜಕೀಯ ಗುರು' ಎಂದು ಪರಿಗಣಿಸಿದ್ದರು.

ಒಟ್ಟಾರೆ ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ತಮ್ಮ ಜೀವನ ಮತ್ತು ಚಟುವಟಿಕೆಗಳಲ್ಲಿ ಕೆಲವೊಂದು ಹೋಲಿಕೆ ವ್ಯತ್ಯಾಸಗಳಿಂದ ಗುರುತಿಸಿಕೊಂಡಿದ್ದಾರೆ. ಅಂತೆಯೇ ಇಬ್ಬರೂ ತಮ್ಮ ಧ್ಯೇಯ ಸಾಧನೆಗೆ ಹಠದ ಸ್ವಾಭಾವವನ್ನು ಅಭಿವ್ಯಕ್ತಿಸಿ ಭಾರತದ ಮತ್ತು ನಾಡಿನ ಪ್ರಗತಿಗಾಗಿ ಚಿಂತನೆ ನಡೆಸಿದವರು.

## ಟಿಪ್ಪಣಿಗಳು

೧. ಗೊರೂರು ರಾಮಸ್ವಾಮಿ ಅಯ್ಯಂಗಾರ್, (೧೯೯೫) ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ, ಪು. ೧೬-೧೬೯.

೨. ಶರ್ಮ.ತಿ.ತಾ., (೧೯೭೧), ಮೋಕ್ಷಗುಂಡಂ, ಪು.೫೬.

೩. ಶರ್ಮ.ತಿತಾ., (೧೯೭೧), ಮೇಲಿನದೇ ಪು. ೫೮.

೪. ಕ.ರಾ.ಪ.ಇಲಾಖೆ, ನಂಬರ್.೧೪೩. ಸರ್.ಎಂ.ವಿಶ್ವೇಶ್ವಯ್ಯನವರ ವಂಶಚರಿತೆ.

೫. ನಾರಾಯಣಸ್ವಾಮಿ.ಕೆ.ಎಸ್.,(೧೯೭೫), ಲಿಂಕನ್, ಲೆನಿನ್, ಗಾಂಧಿ, ಪು. ೯೬

೬. ಯಾಮಾನಾಚಾರ್ಯ ಎಂ.(ಸಂ), (೧೯೬೨), ಭಾಷಣಗಳು ಮತ್ತು ಹೇಳಿಕೆಗಳು, ಪು. ೨೬೬

೭. ತಿಪ್ಪೆರುದ್ರ ಸ್ವಾಮಿ ಎಚ್.(ಅನು), (೧೯೭೪) ಮಹಾತ್ಮ ಸಂ.೧. ಪು. ೨೪೫

## ಅಧ್ಯಾಯ-೩

# ತಾತ್ವಿಕ ಚಿಂತನೆಗಳ ಹೋಲಿಕೆ ಮತ್ತು ವ್ಯತ್ಯಾಸ

೩.೧. ಕೃಷಿ

೩.೨. ಗ್ರಾಮೀಣ ಅಭಿವೃದ್ಧಿ

೩.೩. ಔದ್ಯೋಗೀಕರಣ

೩.೪. ಶಿಕ್ಷಣ

೩.೫. ಸಾರಿಗೆ-ಸಂಪರ್ಕ

೩.೬. ದೇಶದ ಪ್ರಗತಿ

೩.೭. ಆರೋಗ್ಯ

ಯಾವುದೇ ಒಂದು ದೇಶದ ಪ್ರಗತಿಗೆ ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿ ಪ್ರಧಾನ ಆಗಿರುತ್ತವೆ. ಈ ಕ್ಷೇತ್ರಗಳಲ್ಲಿ ಅಭಿವೃದ್ಧಿ ಹೊಂದಿದರೆ ರಾಷ್ಟ್ರದ ಸಮಗ್ರ ಬೆಳವಣಿಗೆಯಾದಂತೆಯೆ ಸರಿ. ಈ ಕ್ಷೇತ್ರಗಳಲ್ಲಿ ಪ್ರಗತಿ ಹೊಂದಲು ಪ್ರತಿಯೊಂದು ರಾಷ್ಟ್ರವು ಪ್ರಯತ್ನಿಸುತ್ತಿರುತ್ತದೆ. ಈ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದರೇ ಮಾತ್ರ ಆ ರಾಷ್ಟ್ರವು ಅಭಿವೃದ್ಧಿ ಹೊಂದಿದ ರಾಷ್ಟ್ರವೆಂದು ಗುರುತಿಸಿ ಕೊಳ್ಳುತ್ತದೆ. ಹೀಗಾಗಿ ಭಾರತವು ಆಂಗ್ಲರ ದಾಸ್ಯಕ್ಕೆ ಸಿಲುಕಿದ್ದಾಗಿನಿಂದ, ಇಂದಿನವರೆಗೂ ಈ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಲು ಪ್ರಯತ್ನಿಸುತ್ತಿದೆ. ಅಲ್ಲದೆ ಈ ಉದ್ದೇಶಗಳಿಗಾಗಿ ವಿದೇಶಗಳಿಂದ ನೆರವನ್ನು ಪಡೆದು ಕೊಳ್ಳುತ್ತಿದೆ. ಈ ನೆರವಿನಿಂದ ಎಲ್ಲಾ ಕ್ಷೇತ್ರಗಳಲ್ಲೂ ಪ್ರಗತಿ ಸಾಧಿಸುವುದೇ ಮುಖ್ಯ ಉದ್ದೇಶ. ಇಂದು ಭಾರತದಲ್ಲಿ ಕೇರಳ ರಾಜ್ಯವು ಶಿಕ್ಷಣದಲ್ಲಿ ಹೆಚ್ಚು ಪ್ರಗತಿ ಸಾಧಿಸಿದ್ದರಿಂದ ಅಲ್ಲಿನ ಜನರಲ್ಲಿ ಶೇ. ೯೦ ಕ್ಕಿಂತಲೂ ಹೆಚ್ಚು ವಿದ್ಯಾವಂತರೆನಿಸಿಕೊಂಡಿದ್ದಾರೆ. ಹೀಗಾಗಿ ಕರ್ನಾಟಕ ರಾಜ್ಯವೂ ವಿದೇಶಿ ನೆರವು ಪಡೆದು ಪ್ರಾಥಮಿಕ ಶಿಕ್ಷಣ ಮತ್ತು ಆರ್ಥಿಕ ಬೆಳವಣಿಗೆಗೆ ಯೋಜನೆಯನ್ನು ಹಾಕಿಕೊಂಡು ಕಾರ್ಯಗತಗೊಳಿಸುತ್ತಿದೆ.

ಆಂಗ್ಲರ ದಾಸ್ಯ ಸಂಕೋಲೆಯಲ್ಲಿ ಸಿಲುಕಿದ್ದ ಸಮಯದಲ್ಲಿ ಈ ಕ್ಷೇತ್ರಗಳಲ್ಲಿ ಚಿಂತನೆ ನಡೆಸಿದವರು ಅನೇಕರಿದ್ದಾರೆ. ಅವರ ಪೈಕಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಪ್ರಮುಖರು. ಇವರುಗಳಲ್ಲಿ ಒಬ್ಬರು ದಿವಾನರಾಗಿ ಯೋಜನೆಗಳನ್ನು ಹಾಕಿಕೊಂಡು ಅದನ್ನು ಕಾರ್ಯಗತಗೊಳಿಸುವಲ್ಲಿ ಯಶಸ್ವಿ ಆದರು. ಇನ್ನೊಬ್ಬರು ತಮ್ಮಲ್ಲಿದ್ದ ಆಲೋಚನೆಗಳನ್ನು ಹಂಚಿಕೊಂಡು, ಕೆಲವೊಂದು ಕ್ಷೇತ್ರಗಳಲ್ಲಿ ಮಾತ್ರ ಸುಧಾರಣೆಗಳನ್ನು ತರುವಲ್ಲಿ ಯಶಸ್ವಿ ಆದರು. ಈ ಹಿನ್ನೆಲೆಯಲ್ಲಿ ಅವರು ಚಿಂತಿಸಿದ ಆಲೋಚನೆಗಳು, ಕಾರ್ಯಕ್ರಮಗಳು ಕೆಲವೊಂದು ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಲು ಇಂದಿಗೂ ಸಾಧ್ಯ ಆಗುತ್ತಿದೆ. ಆದ್ದರಿಂದ ಈ ಕ್ಷೇತ್ರಗಳನ್ನು ಕುರಿತ ಅವರ ಚಿಂತನೆಗಳನ್ನು ಚರ್ಚಿಸುವುದು ಸೂಕ್ತ.

## ೩.೧. ಕೃಷಿ

ಭಾರತಕ್ಕೆ ಪುರಾತನ ಕಾಲದಿಂದ ಇಂದಿನವರೆಗೂ ಕೃಷಿಯೇ ಆರ್ಥಿಕತೆಯ ಬೆನ್ನೆಲುಬು. ಇಲ್ಲಿನ ಹೇರಳವಾದ ಪ್ರಾಕೃತಿಕ ಸಂಪತ್ತನ್ನು ಸಮರ್ಪಕವಾಗಿ ಬಳಸಿಕೊಳ್ಳುತ್ತಿಲ್ಲ. ಇದಕ್ಕೆ ಕಾರಣ ನಮ್ಮಲ್ಲಿರುವ

ಅಜ್ಞಾನ. ಅಲ್ಲದೆ ನಮ್ಮ ರೈತರು ಹೊಂದಿರುವ ಅಜ್ಞಾನದ ಜೊತೆಗೆ ಹಳೆಯ ಅಥವಾ ಸಾಂಪ್ರದಾಯಿಕ ಕೃಷಿ ಪದ್ಧತಿ. ಇದರಿಂದ ಹೆಚ್ಚು ಉತ್ಪಾದನೆಯನ್ನು ಮಾಡಲು ಆಗದೆ ಸಾಲಗಾರರಾಗುವುದೇ ಹೆಚ್ಚು.

ಆದರೆ ವಿಶ್ವೇಶ್ವರಯ್ಯ ಅವರು ತಮ್ಮ ಕಾಲದಲ್ಲೇ ಕೃಷಿಯನ್ನು ಆಧುನಿಕ ರೀತಿಯಲ್ಲಿ ಬೇಸಾಯ ಮಾಡುವಂತೆ ಸಲಹೆ ಕೊಟ್ಟಿದ್ದರು. ಇದಕ್ಕಾಗಿ ಸರ್ಕಾರದ ವತಿಯಿಂದ ಯೋಜನೆಗಳನ್ನು ಹಾಕಿ ಕಾರ್ಯರೂಪಕ್ಕೆ ತಂದಿದ್ದು ಉಂಟು. ಅವರು ಮುಂದುವರೆದ ದೇಶಗಳ ಜನರ ಸರಾಸರಿ ಉತ್ಪನ್ನಗಳನ್ನು ಪರಿಶೀಲಿಸುತ್ತಿದ್ದರು. ಅಲ್ಲದೆ ಅವುಗಳ ವಿವರಣೆಗಳನ್ನು, ಕೆನಡದಲ್ಲಿ ೧೧೧೦, ಆಸ್ಟ್ರೇಲಿಯದಲ್ಲಿ ೬೨೧, ಆದರೆ ಭಾರತದಲ್ಲಿ ಕೇವಲ ೩೧ ರೂ.ಗಳೆಂದು ಜನರ ಆದಾಯದ ಅಂಕಿ-ಅಂಶಗಳನ್ನು ನೀಡಿ ವಿವರಿಸುತ್ತಿದ್ದುಂಟು.[೧] ಅವರು ಪುರಾತನ ಕಾಲದ ಬೇಸಾಯ ಪದ್ಧತಿಯ ಜನರನ್ನು ಎಚ್ಚರಿಸಿ ಆಧುನಿಕ ಬೇಸಾಯ ಪದ್ಧತಿಯನ್ನು ಜಾರಿಗೆ ತಂದರು.

ವಿಶ್ವೇಶ್ವರಯ್ಯ ಅವರು ಆಧುನಿಕ ಬೇಸಾಯ ಪದ್ಧತಿಯನ್ನು ಜಾರಿಗೆ ತರಲು ಸರ್ಕಾರದ ವತಿಯಿಂದ ೧೯೧೨ರಲ್ಲಿ ಒಂದು ಸಮಿತಿಯನ್ನು ನೇಮಿಸಿದರು. ಅಲ್ಲದೆ ೧೯೧೩-೧೪ರಲ್ಲಿ ಡಾ.ಕೋಲ್‌ಮನ್ ಎಂಬ ವಿದೇಶಿ ಕೃಷಿತಜ್ಞರನ್ನು ನೇಮಿಸಲಾಯಿತು.[೨] ವೈಜ್ಞಾನಿಕ ರೀತಿಯಲ್ಲಿ ಬೇಸಾಯ ಮಾಡಲು ಹೆಬ್ಬಾಳದಲ್ಲಿ ಕೃಷಿ ಶಾಲೆಯನ್ನು ಪ್ರಾರಂಭಿಸಿ ರೈತರಿಗೆ ಮತ್ತು ವಿದ್ಯಾರ್ಥಿಗಳಿಗೆ ತರಬೇತಿ ನೀಡಲು ಪ್ರಯತ್ನಿಸಿದರು. ಈ ಪ್ರಯತ್ನಗಳಿಂದಾಗಿ ಮೈಸೂರಿನ ರೈತರು ಆಧುನಿಕ ರೀತಿಯಲ್ಲಿ ಬೇಸಾಯ ಮಾಡಲು ಸಾಧ್ಯ ಆಯಿತು. ಅಲ್ಲದೆ ಹೆಬ್ಬಾಳದಲ್ಲಿ ಉತ್ತಮ ತಳಿಗಳ ಬೀಜಗಳನ್ನು ಸಂಶೋಧನೆ ನಡೆಸಿ ರೈತರಿಗೆ ಸುಲಭ ದರದಲ್ಲಿ ವಿತರಿಸಲಾಗುತ್ತಿತ್ತು.

ರೈತರು ಕೃಷಿಗಾಗಿ ಮಳೆಯನ್ನೇ ಅವಲಂಬಿಸಿದ್ದರು. ಇದರ ಅಭಿವೃದ್ಧಿಗೋಸ್ಕರ ಸಣ್ಣ ಕೆರೆಗಳು, ದೊಡ್ಡಕೆರೆಗಳ ನಿರ್ಮಾಣ ಕಾರ್ಯ ಮತ್ತಷ್ಟು ಚುರುಕುಗೊಂಡಿತ್ತು. ಕೃಷಿ ಪರಿಸ್ಥಿತಿಯ ಅರಿವಿದ್ದ ವಿಶ್ವೇಶ್ವರಯ್ಯ ಅವರು ೧೯೧೧ರಲ್ಲೇ ಕೃಷ್ಣರಾಜ ಅಣೆಕಟ್ಟೆಯನ್ನು ಕನ್ನಂಬಾಡಿ ಎಂಬಲ್ಲಿ ಅಸ್ತಿಭಾರ ಹಾಕಿದ್ದರು. ಇದು ಪ್ರಮುಖವಾಗಿ ವಿದ್ಯುತ್ ಉತ್ಪಾದನೆಗೂ ಮತ್ತು ವ್ಯವಸಾಯಕ್ಕೂ ಅನುಕೂಲವಾಯಿತು. ಆದರಿಂದಾಗಿ ೧೯೧೭ರಲ್ಲಿ ಕಬ್ಬು, ಭತ್ತ ಬೆಳೆಗಳ ಉತ್ಪಾದನೆಗಾಗಿ ನಾಗೇನಹಳ್ಳಿಯಲ್ಲಿ ಒಂದು ಫಾರಂನ್ನೇ ಪ್ರಾರಂಭಿಸಿದರು. ಹೀಗಾಗಿ ಉತ್ತಮ ದರ್ಜೆಯ ಬಿತ್ತನೆ ಬೀಜಗಳು ದೊರೆಯಲು ಸಾಧ್ಯವಾಯಿತು. ಇದರ ಜೊತೆಗೆ ಬೆಳೆಗಳಿಗೆ ರೋಗಗಳು ತಗಲುವುದನ್ನು ತಪ್ಪಿಸಲು ೧೯೧೨ರಲ್ಲೇ ರಾಜ್ಯದ ಪ್ರಥಮ ಕ್ರಿಮಿನಾಶಕ ಅನಿಲ ಘಟಕವನ್ನು ಸ್ಥಾಪಿಸಿದ್ದು ಉಂಟು. ಬೆಳೆಗಳಿಗೆ ಔಷಧಗಳನ್ನು ಸರ್ಕಾರದ ವತಿಯಿಂದಲೇ ನೀಡಲಾಯಿತು. ಈ ಅನುಕೂಲವನ್ನು ಪಡೆದ ರೈತರು ಹೆಚ್ಚಿನ ಕೃಷಿಯ ಇಳುವರಿ ಪಡೆದು ಅಭಿವೃದ್ಧಿ ಹೊಂದಿದರು.

ರೈತರು ಮಾಡುತ್ತಿದ್ದ ಬೇಸಾಯದ ಬಗ್ಗೆ ಕಾಳಜಿವಹಿಸಿದ್ದ ವಿಶ್ವೇಶ್ವರಯ್ಯ ಅವರು ಸಾಲ ಕಲ್ಪಿಸಿಕೊಡಲು ಅನುವು ಮಾಡಿಕೊಟ್ಟರು. ಈ ಸಾಲವನ್ನು ಸರ್ಕಾರದಿಂದ ತಕಾವಿ ಸಾಲವನ್ನಾಗಿ ಪರಿವರ್ತಿಸಿ ರೈತರಿಗೆ ನೀಡಲಾಯಿತು. ರೈತರು ಬೆಳೆದ ಬೆಳೆಗಳಿಗೆ ಉತ್ತಮ ಬೆಲೆ ದೊರೆಯುವಂತೆ ವ್ಯವಸ್ಥೆ ಮಾಡಿದರು. ಇದರ ಜೊತೆಗೆ ಕೃಷಿಯನ್ನು ಒಂದು ವಾಣಿಜ್ಯ ಬೆಳೆಯಾಗಿ ಬೆಳೆಯುವುದಕ್ಕೆ ಆದ್ಯತೆ ನೀಡಲಾಯಿತು. ಅಲ್ಲದೆ ಅಂದು ರೇಷ್ಮೆ ಹುಳುಗಳ ಸಾಕುವಿಕೆಯಿಂದ ರೋಗಗಳು ಬಂದು ರೈತರು ಸಂಕಷ್ಟದಲ್ಲಿದ್ದರು. ಇದನ್ನು ನಿವಾರಿಸಲು ೧೯೧೩ರಂದು ಚೆನ್ನಪಟ್ಟಣದಲ್ಲಿ ರೇಷ್ಮೆ ಮೊಟ್ಟೆಗಳ ಸಂಶೋಧನೆಗಾಗಿ ಒಂದು ಕೇಂದ್ರವನ್ನೇ ಸ್ಥಾಪಿಸಿದರು.[೩] ಜೊತೆಗೆ ಇಟಲಿಯ ರೇಷ್ಮೆ ಹುಳುಗಳ ತಜ್ಞರಾದ ಸೀನ್ಯರ ಮರೀಯವರನ್ನು ಆಹ್ವಾನಿಸಲಾಯಿತು. ಇವರು ಮೊಟ್ಟೆಗಳಿಗೆ ರೋಗ ತಗುಲುವುದನ್ನು ತಪ್ಪಿಸಿ, ಉತ್ತಮ ದರ್ಜೆಯ ರೇಷ್ಮೆ ಮೊಟ್ಟೆಗಳ ಹೊಸತಳಿಗಳನ್ನು ರೈತರಿಗೆ ಪರಿಚಯಿಸಿದರು. ಇದರಿಂದಾಗಿ ರೇಷ್ಮೆ ಕೃಷಿಯು ಸಹ ಹೆಚ್ಚಿನ ಅಭಿವೃದ್ಧಿ ಹೊಂದಿತು. ಈ ರೀತಿಯಾಗಿ ಮೈಸೂರು ಸಂಸ್ಥಾನವು ಆಧುನಿಕ ರೀತಿಯಲ್ಲಿ ಬೇಸಾಯವನ್ನು ಅಳವಡಿಸಿಕೊಂಡಿತ್ತು. ಇದಕ್ಕೆ ಪ್ರೇರಣೆ ನೀಡಿದ ವಿಶ್ವೇಶ್ವರಯ್ಯನವರು ರೈತರನ್ನು ಎಲ್ಲ ಕ್ಷೇತ್ರಗಳಲ್ಲೂ ಅಭಿವೃದ್ಧಿಗೊಳ್ಳುವಂತೆ ಎಚ್ಚರವಹಿಸಿದ್ದರು.

ಗಾಂಧಿ ಅವರು ಸಹ ಭಾರತದ ಅಂದಿನ ಪರಿಸ್ಥಿತಿಯನ್ನು ಅರಿತಿದ್ದರಿಂದ ಪುರಾತನರ ಕಾಲದ ಬೇಸಾಯಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರು. ಅವರು ಕೃಷಿಗೆ ಸಂಬಂಧಿಸಿದ್ದಂತೆ ಹತ್ತಿ ಬೆಳೆಯುವುದಕ್ಕೆ ಹೆಚ್ಚಿನ ಆದ್ಯತೆ ಕೊಟ್ಟಿದ್ದರು. ಖಾದಿಯನ್ನು ಉತ್ಪಾದನೆ ಮಾಡುವುದಕ್ಕಾಗಿ ರೈತರು ಹತ್ತಿಯನ್ನು ಬೆಳೆಯಬೇಕು ಎನ್ನುತ್ತಿದ್ದರು. ಅವರು ಹತ್ತಿಯನ್ನು ಬೆಳೆಯದ ಜಮೀನಿನಲ್ಲಿ ತರಕಾರಿಗಳನ್ನು ಬೆಳೆಯಬೇಕು. ಇದರಿಂದಾಗಿ ಹತ್ತಿ ಬೆಳೆದ ರೈತರಿಗೆ ಸುಲಭ ದರದಲ್ಲಿ ತರಕಾರಿ ದೊರೆಯುವಂತಿರಬೇಕು ಎನ್ನುತ್ತಿದ್ದುದುಂಟು. ಗಾಂಧಿ ರೈತರ ಶೋಷಣೆಯ ವಿರುದ್ಧ ಇದ್ದವರು. ಜಮಿನ್ದಾರರ ಜೊತೆಯಲ್ಲಿದ್ದ ಗಾಂಧಿ ಅವರು ರೈತರನ್ನು ಶೋಷಿಸದಂತೆ ಪ್ರಯತ್ನಿಸುತ್ತಿದ್ದರು. ಅವರು ಎಂದೂ ಕೃಷಿಯನ್ನು ವಾಣಿಜ್ಯ ಬೆಳಯನ್ನಾಗಿ ಬೆಳೆಯಲು ಆದ್ಯತೆ ನೀಡಿರಲಿಲ್ಲ. ಇದು ಜನರನ್ನು ಶೋಷಿಸುವುದಕ್ಕೆ ಕಾರಣ ಆಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದರು. ಅದ್ದರಿಂದ ರೈತರು ತಮಗೆ ಅವಶ್ಯಕವಿದ್ದಷ್ಟು ಮಾತ್ರ ಬೆಳೆಯಲಿ ಎನ್ನುತ್ತಿದ್ದರು.

### ೩.೨. ಗ್ರಾಮೀಣಾಭಿವದ್ಧಿ

ಭಾರತದಲ್ಲಿ ನಗರಗಳಿಗಿಂತ ಗ್ರಾಮಗಳೇ ಹೆಚ್ಚು. ಇವುಗಳು ತಮ್ಮದೇ ಆದ ವ್ಯಾಪ್ತಿಯನ್ನು ಹೊಂದಿದ್ದಲ್ಲದೇ ನಗರಗಳಿಗಿಂತ ವಿಭಿನ್ನವಾಗಿವೆ. ಗ್ರಾಮೀಣ ಜನರ ಸಂಸ್ಕೃತಿ, ಆಚಾರ-ವಿಚಾರಗಳು,

ಸಾಮಾಜಿಕ ಪರಿಸ್ಥಿತಿಯೂ ಸಹ ಭಿನ್ನವಾಗಿವೆ. ಗ್ರಾಮೀಣ ಜನರು ತಮ್ಮ ಸಂಪ್ರದಾಯಗಳನ್ನು ಬಿಟ್ಟು ಬದುಕಲು ಸಾಧ್ಯವಿಲ್ಲವೆನ್ನುವಂಥವರು. ಆದರೆ ಇತ್ತೀಚಿನ ದಿನಗಳಲ್ಲಿ ಕೆಲವೊಂದು ಗ್ರಾಮಗಳು ಆಧುನಿಕತೆಗೆ ಒಳಗಾಗಿ ಬದಲಾಗುತ್ತಿವೆ. ಆದರೆ ಇನ್ನು ಕೆಲವು ಗ್ರಾಮಗಳ ಜನರು ಆಧುನಿಕತೆಯನ್ನು ಅಳವಡಿಸಿಕೊಂಡಿದ್ದರು ಸಹ ತಮ್ಮ ಸಂಪ್ರದಾಯ, ಆಚಾರ-ವಿಚಾರಗಳು, ಕಂದಚಾರ, ಮೂಢನಂಬಿಕೆಗಳನ್ನು ಬಿಟ್ಟು ಹೊರಬರುತ್ತಿಲ್ಲ. ಇದರಿಂದಾಗಿ ಗ್ರಾಮೀಣ ಅಭಿವೃದ್ಧಿಯು ಸರಿಯಾಗಿ ಪ್ರಗತಿಯಾಗುತ್ತಿಲ್ಲ ಎಂದು ಹೇಳಬಹುದು. ಹೀಗಾಗಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ಅಂದು ಚಿಂತಿಸಿ ಕೈಗೊಂಡ ಕಾರ್ಯಗಳನ್ನು ಚರ್ಚಿಸುವುದು ಸೂಕ್ತ.

ಗಾಂಧಿ ಅವರು ಗ್ರಾಮಗಳ ಬಗ್ಗೆ 'ರಾಮರಾಜ್ಯದ' ಕಲ್ಪನೆ ಇಟ್ಟುಕೊಂಡಿದ್ದವರು. ಅವರು ಭಾರತದ ಸರಿಸುಮಾರು ಎಲ್ಲಾ ಹಳ್ಳಿಗಳ ಪರಿಚಯವನ್ನು ಬಲ್ಲವರಾಗಿದ್ದರು. ಅಲ್ಲಿನ ಜೀವನ ಪರಿಸ್ಥಿತಿ, ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಪರಿಸ್ಥಿತಿಯನ್ನೂ ತಿಳಿದುಕೊಳ್ಳಲಾಗಿತ್ತು. ಹೀಗಾಗಿ ಅವರು ಗ್ರಾಮಗಳ ವಿಷಯದಲ್ಲಿ 'ಗ್ರಾಮಸ್ವರಾಜ್ಯ'ದ ಕಲ್ಪನೆಯನ್ನು ಸಹ ಹೊಂದಿದ್ದವರು. ಅಲ್ಲದೆ ಪ್ರತಿಯೊಂದು ಹಳ್ಳಿಯು ಸಹ ಪ್ರಜಾರಾಜ್ಯದಿಂದ ಕೂಡಿರಬೇಕು ಎನ್ನುತ್ತಿದ್ದುದುಂಟು. ಗಾಂಧಿ ಅವರು ಆಲೋಚಿಸುತ್ತಿದ್ದ ಗ್ರಾಮಸ್ವರಾಜ್ಯದ ಕಲ್ಪನೆಯು-

> "ಪ್ರತಿಯೊಂದು ಗ್ರಾಮವು ತನ್ನ ಮೂಲ ಅವಶ್ಯಕತೆಗಳ ಪೂರೈಕೆಯ ವಿಷಯದಲ್ಲಿ ತನ್ನ ಅಕ್ಕಪಕ್ಕದ ಗ್ರಾಮಗಳಿಂದ ಸ್ವತಂತ್ರವಾಗಿರುವುದು. ಆದರೂ ಇತರ ಅನೇಕ ವಿಷಯಗಳಲ್ಲಿ ಅಗತ್ಯವಾಗಿ ಪರಸ್ಪರಾಧೀನರಾಗಿರುವುದು. ಅಂಥ ಗ್ರಾಮದ ಆದ್ಯ ಕರ್ತವ್ಯ: ತನಗೆ ಬೇಕಾದ ಆಹಾರ ಧಾನ್ಯಗಳನ್ನು, ಬಟ್ಟೆಗಳಿಗಾಗಿ ಹತ್ತಿಯನ್ನು ಬೆಳೆಯುವುದು ಅದರಲ್ಲಿ ಗೋಮಾಳಗಳೂ ವಿಶ್ರಾಂತಿಯ ಉಪವನಗಳೂ, ಮಕ್ಕಳಿಗೆ ದೊಡ್ಡವರಿಗೆ ಬೇಕಾದ ಆಟದ ಮೈದಾನಗಳು ಇರುತ್ತವೆ. ಹೆಚ್ಚು ಭೂಮಿಯಿದ್ದರೆ ಅಲ್ಲಿನ ಜನ ಗಾಂಜ, ಹೊಗೆಸೊಪ್ಪು, ಅಫೀಮು ಮುಂತಾದವನ್ನು ಬಿಟ್ಟು ಇತರ ಪ್ರಯೋಜನಕಾರಿಯಾದ ಕಾಸು ಬರುವ ಬೆಳೆಗಳನ್ನು ತೆಗೆಯುತ್ತಾರೆ.
>
> ಅಲ್ಲಿ ನಾಟಕ ಮಂದಿರ, ಪಾಠಶಾಲೆಗಳು ಸಾರ್ವಜನಿಕ ಭವನಗಳಿರುತ್ತವೆ. ತನ್ನದೇ ಆದ ಶುದ್ಧವಾದ ಕುಡಿಯುವ ನೀರಿನ ಹಂಚಿಕೆಯ ವ್ಯವಸ್ಥೆ ಇರುತ್ತದೆ. ಅಂತಿಮ ಮೂಲ ಶಿಕ್ಷಣದ ತರಗತಿಯವರೆಗೆ ಕಡ್ಡಾಯ ಶಿಕ್ಷಣವಿರುತ್ತದೆ. ಸಾಧ್ಯವಾದ ಮಟ್ಟಿಗೆ ಸಹಕಾರ ಪದ್ಧತಿಗೆ ಅನುಸಾರವಾಗಿ ಎಲ್ಲ ಕೆಲಸಗಳೂ ನಡೆಯುತ್ತಿದೆ. ನಾನಾ ಮಟ್ಟದ ಅಸ್ಪೃಶ್ಯತೆಯುಳ್ಳ ಇಂದಿನ ಜಾತಿಗಳೆಂದೂ ಅಲ್ಲಿರುವುದಿಲ್ಲ"[೯]

-ಎಂದು ತಮ್ಮ ಗ್ರಾಮಸ್ವರಾಜ್ಯದ ಕಲ್ಪನೆಯ ಕನಸನ್ನು ಕಂಡಿದ್ದರು. ಅವರ ಪ್ರಕಾರ ಪ್ರತಿಯೊಂದು ಹಳ್ಳಿಯು ಸಂಪೂರ್ಣವಾಗಿ ಸ್ವತಂತ್ರ್ಯವಿರುವುದು. ಈ ಕಲ್ಪನೆಯ ಹಳ್ಳಿಯು ಒಂದು ಪುಟ್ಟ ಸ್ವತಂತ್ರ್ಯ ದೇಶವಿದ್ದಂತೆಯೇ ಸರಿ. ಅಂದು ಕನಸ್ಸು ಕಂಡಿದ್ದ ಗ್ರಾಮಸ್ವರಾಜ್ಯದ ಕಲ್ಪನೆಯಲ್ಲಿ ಅಸ್ಪೃಶ್ಯತೆಯು ಹಳ್ಳಿಗಳಲ್ಲಿ ಇರುವುದಿಲ್ಲವೆಂದು. ಆದರೆ ಈ ಆಧುನಿಕತೆಯನ್ನು ಅಳವಡಿಸಿಕೊಂಡಿದ್ದರೂ ಸಹ ಇಂದೂ ಸಂಪೂರ್ಣವಾಗಿ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಸಾಧ್ಯವಾಗಿಲ್ಲ. ಇಂದು ಸಹ ಹಳ್ಳಿಗಳಲ್ಲಿ ಅಸ್ಪೃಶ್ಯತೆ ಇರುವುದು ಕಂಡುಬರುತ್ತದೆ. ಗಾಂಧಿ ಅವರ ಗ್ರಾಮಸ್ವರಾಜ್ಯದ ಕಲ್ಪನೆಯ ಬಗ್ಗೆ ಸಂಸ್ಕೃತಿ ಚಿಂತಕರಾದ ಡಿ.ಆರ್.ನಾಗರಾಜ ಅವರು-

"ಗಾಂಧಿ ಗ್ರಾಮವೊಂದನ್ನು ಒಂದು ಮುಖ್ಯ ಉತ್ಪಾದನಾ ಘಟಕವೆಂದು ಭಾವಿಸಿದರು. ಸೋಪ್ಪು, ಕಾಗದ, ಎಣ್ಣೆ, ಚರ್ಮ ಇತ್ಯಾದಿಗಳನ್ನು ಉತ್ಪಾದಿಸುವ ಹಕ್ಕಿನ ಏಕಸ್ವಾಮ್ಯ ಗ್ರಾಮಕ್ಕೆ ಇರಬೇಕೆಂದು ಪ್ರತಿಪಾದಿಸಿದ್ದರು. ಅಂದರೆ ಗಾಂಧಿ ಗ್ರಾಮವನ್ನು ಒಂದು ರಾಜಕೀಯ ಉತ್ಪಾದನಾ ಘಟಕ ಎಂದು ಭಾವಿಸಿದ್ದರು"[೫]

-ಎಂದು ತಿಳಿಸಿದ್ದಾರೆ.

ಗಾಂಧಿ ಅವರು ಭಾರತದ ಗ್ರಾಮಗಳಲ್ಲಿರುವ ನೈರ್ಮಲ್ಯ, ಕೊಳಕುತನವನ್ನು ವಿರೋಧಿಸುತ್ತಿದ್ದುಂಟು. ಅಲ್ಲದೆ ಗ್ರಾಮೀಣ ಜನರು ತಮ್ಮ ಗ್ರಾಮಗಳನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕು. ಇದರಿಂದಾಗಿ ಯಾವುದೇ ರೋಗಗಳು ಬರುವುದಿಲ್ಲ. ಹೀಗಾಗಿ ಗ್ರಾಮೀಣ ಜನರನ್ನು ಹೆಚ್ಚು ತಮ್ಮ ಗ್ರಾಮಗಳ ಬಗ್ಗೆ ಆಸಕ್ತಿಯನ್ನು ಹೊಂದಿ, ಅದರ ಅಭಿವೃದ್ಧಿಗೆ ಎಲ್ಲರೂ ಸಹಕಾರ ಮನೋಭಾವನೆಯಿಂದ ದುಡಿಯಬೇಕು ಎಂದು ಚಿಂತಿಸುತ್ತಿದ್ದರು. ಅವರು ಭಾರತದ ಗ್ರಾಮದ ಬಗ್ಗೆ ಇಟ್ಟಿರುವ ಕಲ್ಪನೆಯನ್ನು ತಿಳಿಸಿದ್ದಾರೆ. ಅವರ ಪ್ರಕಾರ-

"ಆದರ್ಶ ಭಾರತೀಯ ಗ್ರಾಮವು ಪರಮ ನೈರ್ಮಲ್ಯದ ನೆಲೆಯಾಗಿ ರೂಪುಗೊಳ್ಳುತ್ತದೆ. ಗ್ರಾಮ ಐದು ಮೈಲಿ ಫಾಸಲೆಯೊಳಗೆ ಸಿಕ್ಕುವ ಸಾಮಾಗ್ರಿಗಳಿಂದಲೇ ನಿರ್ಮಿಸಿದ, ಸಾಕಷ್ಟು ಗಾಳಿ ಬೆಳಕುಗಳಿರುವ ಕುಟೀರಗಳು ಅಲ್ಲಿರುತ್ತವೆ. ಪ್ರತಿಯೊಂದು ಕುಟೀರಕ್ಕೂ ಮನೆಯವರು ತಮ್ಮ ಬಳಕೆಗೆ ಬೇಕಾದ ತರಕಾರಿಗಳನ್ನು ಬೆಳೆಯಲು ಧನಕರುಗಳನ್ನು ಕಟ್ಟಲು ಅವಶ್ಯಕವಾದ ಹಿತ್ತಲು ಇರುತ್ತದೆ. ಹಳ್ಳಿಯ ಓಣಿಗಳು, ಬೀದಿಗಳೂ ನಿರ್ಮಲವಾಗಿರುತ್ತವೆ."[೬]

-ಎಂಬುದು.

ಗಾಂಧಿ ಅವರು ತಮ್ಮ ಸುತ್ತ ಮುತ್ತ ದೊರೆಯುವ ವಸ್ತುಗಳನ್ನು ಬಳಸಿಕೊಳ್ಳಿ ಎಂದು ದೇಶಿಯ ನೆಲೆಯಿಂದ ಆಲೋಚಿಸುತ್ತಿದುದ್ದುಂಟು. ಹೀಗಾಗಿ ಅವರು ಬೇರೆ ದೂರದಲ್ಲಿ ದೊರೆಯುವ ವಸ್ತುಗಳನ್ನು ಬಯಸುತ್ತಿರಲ್ಲಿಲ್ಲ. ಅಲ್ಲದೆ ಅವರು ಚಿಂತಿಸಿದ ಪ್ರತಿಯೊಂದು ಗ್ರಾಮವು ತನಗೆ ಅವಶ್ಯಕವಿರುವ ವಸ್ತುಗಳನ್ನು ತಾವೇ ಬೆಳೆದುಕೊಳ್ಳಬೇಕು ಎಂದಿದ್ದಾರೆ. ಈ ತತ್ತ್ವ ಅಳವಡಿಸಿಕೊಳ್ಳಲು ಜನರು ತಮ್ಮ ಅತಿಯಾದ ಆಶಯಗಳನ್ನು ದೂರ ಮಾಡಿದರೆ ಸಾಧ್ಯ. ಅವರು ಸರಳ ಜೀವನವನ್ನು ಅಳವಡಿಸಿಕೊಂಡರೆ ಮಾತ್ರ ಅದು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಅವರು ಚಿಂತಿಸಿದ ಆಲೋಚನೆಯೂ, ಇಂದೂ ಸಹ ಯಾವುದೇ ಒಂದು ರಾಷ್ಟ್ರವು ರಾಷ್ಟ್ರಮಟ್ಟದಲ್ಲಿ ತನಗೆ ಅವಶ್ಯಕತೆ ಇರುವ ವಸ್ತುಗಳನ್ನು ಬೆಳೆಯ ಸಾಧ್ಯವಿಲ್ಲ. ಇನ್ನು ಹಳ್ಳಿಯ ಆ ರೀತಿಯಲ್ಲಿ ಸ್ವಾತಂತ್ರ್ಯವಾಗಿ ತನಗೆ ಅವಶ್ಯಕತೆಯಿರುವ ಎಲ್ಲ ವಸ್ತುಗಳನ್ನು ಬೆಳೆಯುವುದು ಸಾಧ್ಯವಾಗುವುದಿಲ್ಲ.

ಗಾಂಧಿ ಅವರು ಪ್ರತಿಯೊಂದು ಗ್ರಾಮದಲ್ಲಿ ಇಂತಿಷ್ಟು ಜನರಿರುತ್ತಾರೆ ಎಂದು ಆಲೋಚಿಸುತ್ತಿದ್ದರು. ಅಲ್ಲದೆ ಗ್ರಾಮಾಡಳಿತದ ಬಗ್ಗೆ ಮಾತನಾಡುತ್ತಾ, ಗ್ರಾಮವು ಪಂಚಾಯತ್ ವ್ಯವಸ್ಥೆಯಿಂದ ಕೂಡಿದ್ದು ಐದು ಜನರಿರುವ ಪಂಚಾಯತಿಯ ಗ್ರಾಮದ ಆಡಳಿತವನ್ನು ನಡೆಸುತ್ತದೆ. ಇದರಿಂದಾಗಿ ಯಾವುದೇ ತೊಂದರೆಯಾಗುವುದಿಲ್ಲ.[೭] ಎಲ್ಲರಿಗೂ ಸಮಾನವಾದ ಅಧಿಕಾರವಿರುವುದರಿಂದ ಎಲ್ಲರೂ ನೆಮ್ಮದಿಯಿಂದ

ಜೀವನ ನಡೆಸುತ್ತಾರೆ ಎಂಬ ನಿಲುವಿತ್ತು. ಅಲ್ಲದೆ ಯಾವುದೇ ಗ್ರಾಮವು ಇತರ ಗ್ರಾಮಗಳನ್ನು ಹೆಚ್ಚು ಅವಲಂಬಿಸಿರುವುದಿಲ್ಲ ಎನ್ನುತ್ತಿದ್ದರು.

ಗಾಂಧಿ ಅವರಂತೆ ವಿಶ್ವೇಶ್ವರಯ್ಯ ಅವರು ಸಹ ಕೈಗಾರಿಕೆಗಳ ಜೊತೆಗೆ ಗ್ರಾಮಗಳ ಬಗ್ಗೆಯು ಚಿಂತಿಸುತ್ತಿದ್ದುದುಂಟು. ಅವರ ಚಿಂತನೆಯಲ್ಲಿ ಗ್ರಾಮಗಳನ್ನು 'ಮಾದರಿರಾಜ್ಯ' ವೆಂದು ಕರೆಯದೆ 'ಆತ್ಮಗೌರವದ' ಗ್ರಾಮವಾಗಿರಬೇಕು ಎಂದು ಬಯಸುತ್ತಿದ್ದರು. ವಿಶ್ವೇಶ್ವರಯ್ಯ ಅವರನ್ನು ಗ್ರಾಮಗಳ ಬಗ್ಗೆ ಗಮನಕೊಡಲಿಲ್ಲವೆಂದು ಆರೋಪಿಸುತ್ತಿರುವುದುಂಟು. ಆದರೆ ಅವರು ಗ್ರಾಮಾಭಿವೃದ್ಧಿಯಿಂದಲೇ ದೇಶದ ಅಭಿವೃದ್ಧಿ ಎಂದು ಆಲೋಚಿಸಿದ್ದರು. ಹೀಗಾಗಿ ಗ್ರಾಮಗಳ ಅಭಿವೃದ್ಧಿಗಾಗಿ ಆಧುನಿಕ ರೀತಿಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಾಕಿ ಯಶಸ್ವಿಯಾದರು.

ವಿಶ್ವೇಶ್ವರಯ್ಯ ಅವರು ಆಲೋಚಿಸುತ್ತಿದ್ದುದ್ದು ಗ್ರಾಮಗಳು ತಮ್ಮ ಸ್ವಸಹಾಯ ಪದ್ಧತಿಯಿಂದ ಅಭಿವೃದ್ಧಿ ಹೊಂದಬೇಕು. ಗ್ರಾಮಗಳು ಸರ್ಕಾರವನ್ನು ಅವಲಂಬಿಸಬಾರದು. ಹಳ್ಳಿಯ ಜನರು ತಮ್ಮ ಹಳೆಯ ಕಂದಚಾರಗಳನ್ನು ತೊರೆದು ಹೊಸತನವನ್ನು ಅಳವಡಿಸಿಕೊಂಡು ಕ್ರಿಯಾತ್ಮಕ ಶಕ್ತಿಯಿಂದ ಎದೆಗಾರಿಕೆಯನ್ನು ಹೊಂದಿದರೆ ಪುಷ್ಟಿ ದೊರೆಯುತ್ತದೆ. ಗ್ರಾಮಗಳು ತಮ್ಮದೇ ಆದ ಸಂಘ ಸಂಸ್ಥೆಗಳನ್ನು ರಚಿಸಿಕೊಂಡು ಪರಸ್ಪರ ಸಹಕರಿಸಿ ಕೆಲಸ ಮಾಡುವ ಸಾಮರ್ಥ್ಯಗಳಿಸಿಕೊಳ್ಳಬೇಕು ಎಂಬ ನಿಲುವನ್ನು ವ್ಯಕ್ತಪಡಿಸುತ್ತಿದ್ದರು. ಅಲ್ಲದೆ ಅವರು ಪರಾವಲಂಬನೆಗಿಂತ ಸ್ವಾವಲಂಬನೆ ಶ್ರೇಷ್ಠ ಎನ್ನುತ್ತಿದುದ್ದುಂಟು.

ವಿಶ್ವೇಶ್ವರಯ್ಯ ಅವರು ಹಳ್ಳಿಯ ಜನರನ್ನು ಒತ್ತಾಯ ಪಡಿಸುವುದನ್ನು ವಿರೋಧಿಸುತ್ತಿದುದ್ದುಂಟು. ಅದಕ್ಕೆ ಹಳ್ಳಿಯವರೇ ಅರಿತುಕೊಂಡು ತಮ್ಮ ಗ್ರಾಮಗಳನ್ನು ಸ್ವಚ್ಛಗೊಳಿಸಲಿ ಎನ್ನುತ್ತಿದ್ದರು. ಗ್ರಾಮಗಳ ಅಭಿವೃದ್ಧಿಗಾಗಿ ಸರ್ಕಾರದ ನೆರವಿನಿಂದ ಅನೇಕ ಮಾರ್ಗಗಳನ್ನು, ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರು. ೧೯೧೪ರಲ್ಲಿ ಗ್ರಾಮಾಭಿವೃದ್ಧಿ ಯೋಜನೆಯನ್ನು ಶಾಸನಬದ್ಧ ಮಾಡಲು ಅವರು ವಿರೋಧಿಸಿದರು.[೮] ಹೀಗಾಗಿ ಗ್ರಾಮಸ್ಥರೇ ತಮ್ಮ ತೀರ್ಮಾನ ತೆಗೆದುಕೊಂಡು ತೀರ್ಪು ನೀಡಲಿ ಎಂದು ಸ್ವಾತಂತ್ರ್ಯ ನೀಡಲಾಗಿತ್ತು. ಗ್ರಾಮಾಂತರ ರಸ್ತೆಗಳ ನಿರ್ಮಾಣ, ಕೆರೆನಾಲೆಗಳ ದುರಸ್ತಿ, ಹೂಳುತೆಗೆಯುವುದು, ಸಾಲುಮರಗಳನ್ನು ನೆಟ್ಟು ಬೆಳೆಸುವುದು ಇನ್ನು ಮೊದಲಾದುವುಗಳನ್ನು ಗ್ರಾಮಸ್ಥರೇ ಮಾಡಲು ಸೂಚಿಸಿದರು.

ವಿಶ್ವೇಶ್ವರಯ್ಯ ಅವರು ಆಲೋಚಿಸಿ ಸಂಸ್ಥಾನದ ರೈತರಿಗೆ ಸೋಮವಾರದಂದು ಬಿಡುವು ಎಂದು ಹಳೆಯ ಪದ್ಧತಿಯನ್ನು ಜಾರಿಗೆ ತರಲಾಯಿತು. ಈ ಹಿನ್ನೆಲೆಯಲ್ಲಿ ಗ್ರಾಮ ಸ್ವಯಂ ಸಮಿತಿಯಿಂದ ೬,೧೨೬ ಗ್ರಾಮಗಳು ವಾರಕ್ಕೆ ಅರ್ಧದಿನ ರಜೆಹಾಕಿದವು. ಈ ಅರ್ಧದಿನವನ್ನು ಸಾಮೂಹಿಕ ಕೆಲಸ ಕಾರ್ಯಗಳಿಗೆ ಮೀಸಲಿಡಲು ಒಪ್ಪಿಕೊಂಡವು.[೯] ಅವರು ಆಲೋಚನೆ, ಚಿಂತನೆಯಿಂದಾಗಿ ಮೈಸೂರು

ಸಂಸ್ಥಾನದಲ್ಲಿ ಗ್ರಾಮಗಳ ಅಭಿವೃದ್ಧಿಗೆ ಹೊಸ ಅಲೆ ಪ್ರಾರಂಭವಾಯಿತು. ಇದರ ಜೊತೆಗೆ ಗ್ರಾಮ ಸ್ವಯಂ ಸಮಿತಿಗಳು ಸರ್ಕಾರದ ವತಿಯಿಂದ ಹೆಚ್ಚು ಸೌಲಭ್ಯ ಪಡೆದುಕೊಳ್ಳಲು ಪ್ರಯತ್ನಿಸಿದವು.

ಗ್ರಾಮಗಳಿಗೆ ಸಂಬಂಧಿಸಿದಂತೆ ಪ್ರಜಾಪ್ರಭುತ್ವ ನೀತಿಗನುಸಾರವಾಗಿ ಅಧಿಕಾರವನ್ನು ವಿಂಗಡಿಸಿದರು. ಹೀಗಾಗಿ ಜಿಲ್ಲಾ ಮಂಡಲಿ, ತಾಲೂಕು ಮಂಡಲಿ, ಗ್ರಾಮ ಪಂಚಾಯತ್‌ಗಳು ಅಸ್ತಿತ್ವಕ್ಕೆ ಬಂದವು. ಇವುಗಳಲ್ಲದೆ ಗ್ರಾಮಗಳಿಗೆ ನ್ಯಾಯಾಲಯಗಳನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಿದರು. ಇವುಗಳನ್ನು ನೋಡಿಕೊಳ್ಳುವುದಕ್ಕೆ ಒಂದು ಸ್ಥಾಯೀ ಸಮಿತಿಯನ್ನು ನೇಮಿಸಿದರು. ಇದರಿಂದಾಗಿ ಗ್ರಾಮೀಣ ಜನರಿಗೂ ಅಧಿಕಾರ ಸಿಗುವಲ್ಲಿ ಸ್ವಲ್ಪ ಪ್ರಯತ್ನವನ್ನು ಮೈಸೂರು ಸಂಸ್ಥಾನದಲ್ಲಿ ವಿಶ್ವೇಶ್ವರಯ್ಯ ಅವರು ಪ್ರಯತ್ನಿಸಿದ್ದರು.

## ೩.೩. ಔದ್ಯೋಗೀಕರಣ

ಭಾರತವನ್ನು ಪಾಶ್ಚಾತ್ಯ ದೇಶಗಳಿಗೆ ಹೋಲಿಸಿದಾಗ ಮುಂದುವರೆಯುತ್ತಿರುವ ದೇಶವಾಗಿದೆ. ಇಲ್ಲಿರುವ ಬಡತನ, ಅನಕ್ಷರತೆ, ನಿರುದ್ಯೋಗ ಸಮಸ್ಯೆಗಳು ಪ್ರಮುಖವಾಗಿವೆ. ಎಲ್ಲಕ್ಕಿಂತ ಮುಖ್ಯವಾಗಿ ದಿನೇ ದಿನೇ ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಭ್ರಷ್ಟಾಚಾರಗಳು ಪ್ರಗತಿಗೆ ಅಡ್ಡಿಯನ್ನುಂಟು ಮಾಡುತ್ತಿವೆ. ಹೀಗಾಗಿ ಭಾರತವು ಸ್ವಾತಂತ್ರ್ಯ ಪಡೆಯದೆ ಇದ್ದ ಸಂದರ್ಭದಲ್ಲಿಯು ಇದೇ ಸಮಸ್ಯೆಯನ್ನು ಹೊಂದಿತ್ತು. ಅಂದು ಪ್ರಮುಖವಾಗಿ, ದೇಶವು ಆಂಗ್ಲರ ಆಳ್ವಿಕೆಗೆ ಸಿಲುಕಿ ತತ್ತರಿಸುತ್ತಿತ್ತು. ದೇಶದ ಸಂಪತ್ತು ದಿನೇ ದಿನೇ ಬರಿದಾಗುತ್ತ ಹೋದಂತೆ, ಇಂಗ್ಲೆಂಡ್ ಶ್ರೀಮಂತವಾಗತೊಡಗಿತ್ತು. ಹೀಗಾಗಿ ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಚಿಂತನೆಗಳು, ಯೋಜನೆಗಳು ದೇಶದ ಪ್ರಗತಿಗೆ ಅನುಕೂಲವಾಗತೊಡಗಿದ್ದವು. ಇವರಿಬ್ಬರು ದೇಶವನ್ನು ಸ್ವಾವಲಂಬಿಯಾಗಲೂ ಬಯಸಿದರೂ ಕೂಡ ಧೋರಣೆಗಳು, ಕ್ರಮಗಳು ಮಾತ್ರ ವಿಭಿನ್ನವಾಗಿದ್ದವು.

ವಿಶ್ವೇಶ್ವರಯ್ಯ ಅವರು ದೇಶದ ಅಭಿವೃದ್ಧಿಗೆ ಪಾಶ್ಚಾತ್ಯ ರಾಷ್ಟ್ರಗಳಂತೆ ಪ್ರಗತಿಹೊಂದಲು ಆಲೋಚಿಸಿದ್ದರು. ಅವರು ವಿದೇಶಗಳಿಗೆ ಭೇಟಿನೀಡುತ್ತಿದ್ದ ಸಮಯದಲ್ಲಿ, ಅವುಗಳ ಕೈಗಾರಿಕೆಯಿಂದ ಪ್ರಗತಿ ಹೊಂದುತ್ತಿರುವುದನ್ನು ಕಂಡರು. ಅಲ್ಲದೆ ಅವುಗಳ ಪ್ರಗತಿಯ ಅಂಕಿ-ಅಂಶಗಳನ್ನು ಸಂಗ್ರಹಿಸಿಕೊಳ್ಳುತ್ತಿದ್ದುದುಂಟು. ಸಾಮಾನ್ಯವಾಗಿ ಇಂಜಿನಿಯರಾಗಿದ್ದು ಆಧುನಿಕತೆಯನ್ನು ಮೈಗೂಡಿಸಿ ಕೊಂಡಿದ್ದರಿಂದ ವಿಜ್ಞಾನ-ತಂತ್ರಜ್ಞಾನ, ತಂತ್ರಗಳಲ್ಲಿ ಹೆಚ್ಚು ವಿಶ್ವಾಸವಿತ್ತು. ಈ ತಂತ್ರಜ್ಞಾನ ವಿಜ್ಞಾನಗಳನ್ನು ಅಳವಡಿಸಿಕೊಂಡರೆ ದೇಶವು ಪ್ರಗತಿ ಹೊಂದಲು ಸಾಧ್ಯ ಎಂದು ಆಲೋಚಿಸುತ್ತಿದ್ದುದುಂಟು. ಅಲ್ಲದೆ ಅವರು ಪ್ರತಿಯೊಂದು ವಸ್ತುಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುವುದನ್ನು

ಸಹಿಸುತ್ತಿರಲಿಲ್ಲ. ಹೀಗಾಗಿ ದೇಶವು ಎಲ್ಲ ಕ್ಷೇತ್ರಗಳಲ್ಲೂ ಪ್ರಗತಿ ಹೊಂದಬೇಕೆಂಬ ಗುರಿಯನ್ನಿಟ್ಟು ಕೊಂಡು 'ಔದ್ಯೋಗಿಕರಣ ಇಲ್ಲವೇ ಮರಣ' ಎಂಬ ಘೋಷಣೆಯನ್ನು ನೀಡಿದರು.

ಅಂತೆಯೇ ಗಾಂಧಿಯು ಸಹ ಆಧುನಿಕತೆಯನ್ನು ಬಲ್ಲವರಾಗಿದ್ದರು. ವಿದೇಶಗಳು ಕೈಗಾರಿಕೆಯಿಂದ ಪ್ರಗತಿ ಹೊಂದುತ್ತಿರುವುದನ್ನು ಕಂಡಿದ್ದರು. ಆದರೆ ಅವುಗಳು ಮುಂದುವರೆಯುತ್ತಿರುವುದು ಬೇರೊಬ್ಬರನ್ನು ಶೋಷಣೆ ಮಾಡಲು ಎಂದು ಅರಿತುಕೊಂಡವರಾಗಿದ್ದರು. ಅಲ್ಲದೆ ಭಾರತವು ಈ ಎಲ್ಲ ಆಧುನಿಕತೆಯನ್ನು ಬಳಸಿಕೊಂಡರೆ ಕೇಂದ್ರೀಕರಣಕ್ಕೆ ಅವಕಾಶ ಕಲ್ಪಿಸಿಕೊಟ್ಟಂತೆ ಎಂದು ಆಲೋಚಿಸುತ್ತಿದ್ದುದುಂಟು. ಈ ಆಧುನಿಕತೆಯನ್ನು ಅಳವಡಿಸಿಕೊಂಡರೆ ಭಾರತವು ಬೇರೆ ದೇಶಗಳನ್ನು ಶೋಷಣೆ ಮಾಡಲೇಬೇಕು. ಅದಷ್ಟೇ ಅಲ್ಲದೆ ಯಂತ್ರದಿಂದ ನಿರುದ್ಯೋಗದ ಸಮಸ್ಯೆ ಉಂಟಾಗುತ್ತದೆಂದು ಚಿಂತಿಸಿದರು. ಹೀಗಾಗಿ ಅವರು ಯಂತ್ರಗಳನ್ನು ವಿರೋಧಿಸುತ್ತಾ 'ಔದ್ಯೋಗೀಕರಣದಿಂದಲೇ ಮರಣ' ಎಂಬ ಮಂತ್ರವನ್ನು ಘೋಷಿಸಿದರು.

ವಿಶ್ವೇಶ್ವರಯ್ಯನವರ ಚಿಂತನೆಯು ಪ್ರಪಂಚದ ಪ್ರತಿಯೊಂದು ರಾಷ್ಟ್ರಗಳು ತಂತ್ರಜ್ಞಾನದಿಂದ ಮುಂದುವರೆಯುತ್ತಿರುವಾಗ ಭಾರತವು ಸಹ ಅದನ್ನು ಅಳವಡಿಸಿಕೊಂಡು ಪ್ರಗತಿ ಸಾಧಿಸಬೇಕು. ಹೀಗಾದರೆ ಮಾತ್ರ ದೇಶವು ಆಧುನಿಕವಾಗಿ ಜಗತ್ತಿನಲ್ಲಿ ಸ್ಪರ್ಧಿಸಲು ಸಾಧ್ಯವಾಗುತ್ತವೆ ಎಂದು ಆಲೋಚಿಸುತ್ತಿದ್ದುದುಂಟು. ಹೀಗಾಗಿ ದೇಶದ ಅಭಿವೃದ್ಧಿ ಬಗ್ಗೆ ಚಿಂತಿಸಿದ ವಿಶ್ವೇಶ್ವರಯ್ಯನವರು ಪ್ರಜಾ ಪ್ರತಿನಿಧಿ ಸಭೆಯಲ್ಲಿ ಮಾತನಾಡುತ್ತಾ-

> "ನಮ್ಮ ಖನಿಜ ಸಂಪನ್ಮೂಲಗಳನ್ನು ಬಳಸಿಕೊಳ್ಳಬೇಕಾಗಿದೆ. ಬಾಬಬುಡನಗಿರಿ ಶ್ರೇಣಿಯ ಕಬ್ಬಿಣ ಮತ್ತು ಅದಿರಿನ ನಿಕ್ಷೇಪವನ್ನು ಬಳಸಿಕೊಳ್ಳಲು ಅವಕಾಶವಿದೆ. ಮರದ ಇದ್ದಿಲನ್ನು ಉಪಯೋಗಿಸಿ ಕಬ್ಬಿಣದ ಅದಿರನ್ನು ಕರಗಿಸಿ ವಾಣಿಜ್ಯ ಪ್ರಮಾಣದಲ್ಲಿ ಉತ್ಪಾದಿಸುವ ಸಮಸ್ಯೆ ಬಗೆಹರಿದರೆ ಇದು ಸಾಧ್ಯ"[೧೦]

-ಎಂದು ತಿಳಿಸಿದರು ತದನಂತರ ಯೋಜನೆಯನ್ನು ಹಾಕಿ ಭದ್ರಾವತಿಯಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಈ ಕೈಗಾರಿಕೆಯು ಸ್ಥಾಪನೆಯಿಂದ ಜನರಿಗೆ ಉದ್ಯೋಗವು ದೊರೆತು, ನಿರುದ್ಯೋಗ ಸಮಸ್ಯೆಯು ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಯಿತು. ಇದಲ್ಲದೆ ಮೈಸೂರು ಸಂಸ್ಥಾನಕ್ಕೆ ಹೆಚ್ಚಿನ ಆದಾಯವು ದೊರಕಿತು. ಈ ಕಾರ್ಖಾನೆಯನ್ನು ೧೯೧೮ರಲ್ಲಿ ಸ್ಥಾಪನೆಮಾಡಿದರೂ ೧೯೨೩ರಲ್ಲಿ ಉತ್ಪಾದನೆಯನ್ನು ಆರಂಭಿಸಿತು. ಅದು ನಷ್ಟವಾಗುತ್ತಿರುವಾಗ ದಕ್ಷವಾಗಿ ನಿರ್ವಹಿಸಿ ಲಾಭ ದೊರೆಯುವಂತೆ ವಿಶ್ವೇಶ್ವರಯ್ಯ ಅವರು ಮಾಡಿದರು. ಅಂದಿನ ಕಾಲದಲ್ಲೇ ಅಮೇರಿಕಾ ಸಂಯುಕ್ತ ಸಂಸ್ಥಾನಕ್ಕೆ ಕಬ್ಬಿಣವನ್ನು ರಫ್ತು ಮಾಡಲಾಯಿತು. ಇದರಿಂದಾಗಿ ಹೆಚ್ಚು ಲಾಭವನ್ನು ಇಂದು ಸಹ ಪಡೆಯುತ್ತಿದೆ.

ಗಾಂಧಿ ಅವರು ಭಾರತವು ಔದ್ಯೋಗೀಕರಣವಾಗುವುದನ್ನು ವಿರೋಧಿಸುತ್ತಾ-

> "ಯಾವುದೇ ಸಂದರ್ಭದಲ್ಲಿಯು ಯಾವ ದೇಶಕ್ಕೂ ಔದ್ಯೋಗೀಕರಣ ಅವಶ್ಯಕವೆಂದು ನಾ ನಂಬುವುದಿಲ್ಲ. ಭಾರತಕ್ಕಂತೂ ಇನ್ನು ಕಡಿಮೆ ನಿಜಕ್ಕೂ ಸ್ವತಂತ್ರ್ಯ ಭಾರತದ ತನ್ನ ಸಾವಿರಾರು ಕುಟೀರಗಳನ್ನು ಬೆಳಸಿ ಜಗತ್ತಿನೊಡನೆ ಶಾಂತಿಯಿಂದ ಬದಕಲು ಸರಳವಾದ, ಉದಾತ್ತವಾದ ಜೀವನ ಕ್ರಮವನ್ನು ಅನುಸರಿಸಿದರೆ ಸಂಕಟದಿಂದ ತೊಳಲುತ್ತಿರುವ ಜಗತ್ತಿಗೆ ತನ್ನ ಕರ್ತವ್ಯ ಸಲ್ಲಿಸಿದಂತೆ"

-ಎಂದು ಹೇಳಿದ್ದಾರೆ. ಅಲ್ಲದೆ ಅವರ ಪ್ರಮುಖ ಧ್ಯೇಯ ಇಡೀ ಜಗತ್ತಿಗೆ ಔದ್ಯೋಗೀಕರಣ ಬೇಡ, ಇದರಿಂದ ಜಗತ್ತಿನ ಸಮೃದ್ಧಿಗೆ ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಸರಳ ಜೀವನ ನಡೆಸಿದರೆ ಯಾವುದೇ ಸ್ಪರ್ಧೆ ಇರುವುದಿಲ್ಲ. ಮಾನವನು ಉಚ್ಚ ರೀತಿಯಲ್ಲಿ ವಿಚಾರ ಮಾಡದೆ ಸಾಮಾನ್ಯ ರೀತಿಯಲ್ಲಿ ಬದುಕುವ ಕಲೆಯನ್ನು ಕಲಿಯಬೇಕು. ಆಗ ಮಾತ್ರ ಪ್ರಪಂಚವು ಸಮೃದ್ಧಿಯಿಂದ ಬದುಕಲು ಸಾಧ್ಯ ಎನ್ನುತ್ತಿದ್ದುದುಂಟು. ಅಲ್ಲದೆ ಗಾಂಧಿ ಅವರು ಭಾರತವು ಔದ್ಯೋಗೀಕರಣವನ್ನು ಅಳವಡಿಸಿಕೊಳ್ಳದೆ ಜಗತ್ತಿನಲ್ಲಿರುವ ತೊಂದರೆಯನ್ನು ತೊಲಗಿಸಬೇಕು. ಇಲ್ಲಿರುವ ಗೃಹಕೈಗಾರಿಕೆಯನ್ನು ಅಭಿವೃದ್ಧಿ ಪಡಿಸಿದರೆ ಅದು ಸಾಧ್ಯವಾಗುತ್ತದೆ ಎಂದು ಆಲೋಚಿಸುತ್ತಿದ್ದರು. ಗಾಂಧಿ ಅವರು ಸರಳ ಜೀವನಕ್ಕೆ ಮಾತ್ರ ಆದ್ಯತೆ ಕೊಟ್ಟವರು. ಆದರೆ ದೇಶದ ಪ್ರಗತಿಯ ವಿಷಯದಲ್ಲಂತೂ ಕೈಗಾರಿಕೆಯಿಂದ ಸಾಧ್ಯವಿಲ್ಲವೆನ್ನುತ್ತಿದ್ದರು. ಅವರ ಸರಳ ಜೀವನವನ್ನು ಈ ಆಧುನಿಕ ಜಗತ್ತಿನಲ್ಲಿ ಅಳವಡಿಸಿಕೊಳ್ಳುವುದು ತುಂಬ ಕಷ್ಟವಿದೆ. ಅದನ್ನು ಜನರು ವಿರೋಧಿಸಿ ತಮ್ಮ ಆಧುನಿಕ ಸಂಪತ್ತಿನ ಜೀವನ ನಡೆಸುವುದೇ ಅವರ ಪ್ರಮುಖ ಧ್ಯೇಯವಾಗಿತ್ತು.

ಗಾಂಧಿ ಅವರ ಆಲೋಚನೆಯ ಪ್ರಕಾರ ಭಾರತಕ್ಕೆ ಔದ್ಯೋಗೀಕರಣವೆಂದರೆ ರಾಟೆಯೇ ನೂಲುವಿಕೆಯ ಪುನರ್ಜೀವನವೇ. ರಾಟೆಯ ಮೂಲಕ ಈ ನಾಡಿನ ಗುಡಿಸಲುಗಳಲ್ಲಿರುವ ಜನರ ದಿವಾಳಿಯನ್ನು ತಪ್ಪಿಸಬಹುದು. ಅಲ್ಲದೆ ಭಾರತದ ದಕ್ಷ ತರುಣರೆಲ್ಲರೂ ಈ ರಾಟೆಯಿಂದ ನೂಲುವುದನ್ನು ಕಲಿತು ತಮ್ಮ ಕೌಶಲ್ಯವನ್ನು ತೋರಿಸಬೇಕು. ಇದರಿಂದ ಅಭಿವೃದ್ಧಿಮಟ್ಟವು ಹೆಚ್ಚುತ್ತದೆ. ಹೀಗಾಗಿ ಭಾರತವು ಬೇರೊಬ್ಬರನ್ನು ಶೋಷಣೆ ಮಾಡದೆ ಶಾಂತಿಯಿಂದ ಬದುಕಲು ಸಾಧ್ಯ ಎನ್ನುವ ನಿಲುವಿತ್ತು.

ಆದರೆ ವಿಶ್ವೇಶ್ವರಯ್ಯ ಅವರು ಗಾಂಧಿ ಅವರ ತತ್ತ್ವವನ್ನು ವಿರೋಧಿಸುತ್ತಿದ್ದುದುಂಟು. ನಮ್ಮಲ್ಲಿರುವ ಸಂಪತ್ತನ್ನು ಸಮಗ್ರವಾಗಿ ಬಳಸಿಕೊಳ್ಳಲು ಕೈಗಾರಿಕೆ ಅವಶ್ಯಕವೆಂದರು. ಅವರು ಮೋಟಾರು ಕಾರ್ಖಾನೆ, ವಿಮಾನ ಕಾರ್ಖಾನೆ, ವಿದ್ಯುತ್ ಇವುಗಳು ಆಧುನಿಕ ನಾಗರೀಕತೆಗೆ ತುಂಬ ಅವಶ್ಯಕವೆಂದು ಆಲೋಚಿಸಿದರು. ಅಲ್ಲದೆ ಕಾರ್ಖಾನೆಗಳನ್ನು ಸ್ಥಾಪಿಸಲು ಪ್ರಯತ್ನಪಟ್ಟರು. ಆಂಗ್ಲ ಸರ್ಕಾರವು ವಿರೋಧಿಸಿದ್ದರಿಂದ ಅದು ಸಾಧ್ಯವಾಗಲಿಲ್ಲ. ಅದರೂ ಕೆಲವೊಂದು ಕ್ಷೇತ್ರಗಳಲ್ಲಿ ಕಾರ್ಖಾನೆ ಸ್ಥಾಪಿಸಲು ಯಶಸ್ವಿಯಾದರು. ಅವರ ಚಿಂತನೆ, ದೂರದೃಷ್ಟಿ, ಯೋಜನೆಗಳನ್ನು

ಮೈಸೂರು ಸಂಸ್ಥಾನವಲ್ಲದೇ ಭಾರತ ಸರ್ಕಾರವು ಇಂದು ಅಳವಡಿಸಿಕೊಂಡಿದೆ. ಆ ಮೂಲಕ ಇಂದಿನ ಜಗತ್ತಿನ ಜೊತೆ ಸ್ಪರ್ಧಿಸಲು ಪ್ರಯತ್ನಿಸುತ್ತಿದೆ. ಆದರೆ ಗಾಂಧಿ ಅವರ ಪ್ರಮುಖ ಧ್ಯೇಯ ಕೈಗಾರಿಕೆಯಿಂದ ನಿರುದ್ಯೋಗ ಸೃಷ್ಟಿಯಾಗುವುದರ ಜೊತೆಗೆ ಜನರನ್ನು ಶೋಷಣೆ ಮಾಡಲಾಗುತ್ತದೆ ಎನ್ನುವುದಾಗಿತ್ತು. ಇಂದು ಸಹ ಕೈಗಾರಿಕೆಯಿಂದ ಶೋಷಣೆಯಾದರೂ ಪ್ರಗತಿಗೆ ಪ್ರಮುಖ ಅಸ್ತ್ರವಾಗಿದೆ.

ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ಪರಸ್ಪರ ಗೌರವ ಕೊಡುತ್ತಿದ್ದರು ಸಹ ಯಂತ್ರದ ವಿಷಯದಲ್ಲಂತೂ ವೈರಿಗಳಾಗಿದ್ದುದು ಇವರಿಬ್ಬರ ಕಾಗದ ಪತ್ರಗಳನ್ನು ಗಮನಿಸಿದರೆ ಕಂಡುಬರುತ್ತದೆ. ಆದರೆ ಇವರು ಎಷ್ಟೇ ವೈರಿಗಳಾಗಿದ್ದರು ಸಹ ಇವರಿಬ್ಬರ ಪ್ರಧಾನ ಗುರಿ ದೇಶದ ಪ್ರಗತಿ ಹೊಂದುವುದರ ಜೊತೆಗೆ ಸ್ವಾವಲಂಬಿಯಾಗುವುದೇ ಆಗಿತ್ತು.

### ೩.೪. ಶಿಕ್ಷಣ

ಭಾರತವು ಹಳ್ಳಿಗಳಿಂದ ಕೂಡಿದ್ದು ಬಡತನ, ಅನಕ್ಷರತೆಯಿಂದ ನರಳುತ್ತಿದೆ. ಮುಂದುವರೆದ ರಾಷ್ಟ್ರಗಳಿಗೆ ಹೋಲಿಸಿದರೆ ಸಾಕ್ಷರತೆಯಲ್ಲಿಯೂ ಸಹ ಬಹಳ ಹಿಂದೆ ಉಳಿದಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ ಸುಧಾರಿಸಿದೆ.

ಭಾರತದಲ್ಲಿ ಪುರಾತನ ಕಾಲದಿಂದಲೂ ಶಿಕ್ಷಣ ಪಡೆದವರು ಬ್ರಾಹ್ಮಣರೂ ಮಾತ್ರ. ಇವರು ಸಂಸ್ಕೃತವನ್ನು ಬೋಧಿಸುತ್ತಾ ಬಂದರು. ಅದನ್ನು ಯಾರಾದರೂ ಓದಿದರೆ ಅಪವಿತ್ರವಾಗುತ್ತದೆ ಎಂದು ಭಾವಿಸುತ್ತಿದುದ್ದುಂಟು. ಅದರಲ್ಲೂ ಹಿಂದುಳಿದ ವರ್ಗದವರು ಹಾಗೂ ದಲಿತ ಜನಾಂಗಗಳು ಸಂಸ್ಕೃತವನ್ನು ಓದಿದರೆ ಕ್ರೂರವಾದ ಶಿಕ್ಷೆಯನ್ನು ಕೊಡುತ್ತಿದ್ದರು. ಹೀಗಾಗಿ ಭಾರತದ ಸಮಾಜವು ಅಂದು ಧಾರ್ಮಿಕವಾಗಿ, ಆರ್ಥಿಕವಾಗಿ, ಅಂಧಕಾರದಿಂದ ಕೂಡಿತ್ತು. ಅಲ್ಲದೆ ಮೂಢನಂಬಿಕೆ, ಸಂಪ್ರದಾಯ, ಆಚಾರ-ವಿಚಾರಗಳು ಜನರಲ್ಲಿ ಬೇರು ಬಿಟ್ಟಿದ್ದವು. ಇದಿರಂದ ಶಿಕ್ಷಣ ಪಡೆಯಲು ಕೆಳವರ್ಗದ ಹಾಗೂ ಶೋಷಿತ ಜನರಿಗೆ ಸಾಧ್ಯವಾಗಲೇ ಇಲ್ಲ.

ಆದರೆ ಭಾರತವನ್ನು ಆಕ್ರಮಿಸಿಕೊಂಡಿದ್ದ ಆಂಗ್ಲರು ತಮ್ಮ ಆಡಳಿತವನ್ನು ನಡೆಸಲು ಇಂಗ್ಲಿಷ್ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರು. ಯಾವುದೇ ಜನಾಂಗಗಳಿಗೂ ತಾರತಮ್ಯ ಇಲ್ಲದೆ ಶಿಕ್ಷಣ ಪದ್ಧತಿಯನ್ನು ಜಾರಿಗೊಳಿಸಿದರು. ಆದರೂ ಸಹ ಅಸ್ಪೃಶ್ಯರನ್ನು ಶಾಲೆಗೆ ಸೇರಿಸುಕೊಳ್ಳುವಲ್ಲಿ ಬ್ರಾಹ್ಮಣರು ವಿರೋಧಿಸುತ್ತಿದುದ್ದುಂಟು. ಇಂಥಹ ಸಮಯದಲ್ಲೇ ಬಿ.ಆರ್.ಅಂಬೇಡ್ಕರ್ ಅವರು ಇಂಗ್ಲಿಷ್ ಭಾಷೆಯ ಮೂಲಕ ಉನ್ನತ ಶಿಕ್ಷಣವನ್ನು ಪಡೆದದ್ದು. ಇದು ದೊಡ್ಡ ಸಾಧನೆಯೇ ಸರಿ.

ಆಂಗ್ಲರು ಹಾಕಿಕೊಟ್ಟ ಆಧುನಿಕ ಶಿಕ್ಷಣ ಪದ್ಧತಿಯನ್ನು ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ಪಡೆದಿದ್ದರು. ಆದರೆ ಇವರಲ್ಲಿ ಒಬ್ಬರು ಇಂಜಿನಿಯರ್ ಆಗಿ ಗುರುತಿಸಿಕೊಂಡು ಅನಂತರ ದಿವಾನರಾಗಿ ಕೆಲವೊಂದು ಬದಲಾವಣೆ ಮಾಡಲು ಪ್ರಯತ್ನಿಸಿದರು. ಇನ್ನೊಬ್ಬರು ಬ್ಯಾರಿಸ್ಟರ್ (ವಕೀಲ)ರಾಗಿ ಗುರುತಿಸಿಕೊಂಡು ಸಮಾಜ ಸುಧಾರಕರಾಗಿ ಮಾರ್ಪಟ್ಟರು.

ಗಾಂಧಿ ಅವರು ಆಧುನಿಕ ಶಿಕ್ಷಣ ಪಡೆದರೂ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅಂದಿನ ಪರಿಸ್ಥಿತಿಯ ಮಿತಿಗಳೊಂದಿಗೆ ಮಾತ್ರ ಚಿಂತಿಸಿದವರು. ಇವರಲ್ಲಿ ಆಧುನಿಕ ಶಿಕ್ಷಣ ಪದ್ಧತಿಯ ಬಗೆಗೆ ಹೆಚ್ಚಿನ ಆಸಕ್ತಿ ಇರಲಿಲ್ಲ. ತಾವು ಹೊಸ ವಿಚಾರಗಳನ್ನು ತಿಳಿದುಕೊಂಡಿದ್ದರೂ ಸಹ ಹಿಂದೂ ಸಂಪ್ರದಾಯದಂತೆ ಮೂಲ ಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುತ್ತಿದ್ದರು. ಅಲ್ಲದೆ ಅವರು ದಕ್ಷಿಣ ಆಫ್ರಿಕಾದಲ್ಲಿದ್ದಂಥಹ ಸಂದರ್ಭದಲ್ಲಿ ಮಕ್ಕಳಿಗೆ ಶಿಕ್ಷಣವನ್ನು ಹೇಳಿ ಕೊಡುತ್ತಿದ್ದುದುಂಟು. ಗಾಂಧಿ ಅವರು-

> "ಪ್ರಚಲಿತ ಶಿಕ್ಷಣ ಪದ್ಧತಿಯಲ್ಲಿ ನನಗೆ ವಿಶ್ವಾಸವಿರಲಿಲ್ಲ. ಅನುಭವದಿಂದಲೂ ಪ್ರಯೋಗದಿಂದಲೂ ಸರಿಯಾದ ಪದ್ಧತಿಯನ್ನು ಕಂಡು ಹಿಡಿಯಬೇಕೆಂಬುದು ನನ್ನ ಮನಸ್ಸಿನಲ್ಲಿತ್ತು. ನನಗೆ ಇಷ್ಟು ವಿಷಯವಂತೂ ಚೆನ್ನಾಗಿ ಗೊತ್ತಿತ್ತು. ಆದರ್ಶ ಪರಿಸ್ಥಿತಿಯಲ್ಲಿ ನಿಜವಾದ ವಿದ್ಯೆಯನ್ನು ಮಕ್ಕಳಿಗೆ ಕಲಿಸಬೇಕಾದವರು ಮಾತಪಿತೃಗಳೇ ಮಕ್ಕಳ ಶಿಕ್ಷಣದಲ್ಲಿ ಹೊರಗಡೆಯ ಪ್ರಭಾವ ಆದಷ್ಟು ಕಡಿಮೆ ಇರಬೇಕು"[೨]

-ಎಂದು ಹೇಳುವುದರ ಮೂಲಕ ಪ್ರಥಾಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ತಂದೆತಾಯಿಗಳಿಗೆ ಹೆಚ್ಚಿನ ಜವಾಬ್ದಾರಿಯನ್ನು ಹೊರೆಸಿದ್ದಾರೆ. ತಮ್ಮ ಮಕ್ಕಳಿಗೆ ಮನೆಯಲ್ಲಿ ಶಿಕ್ಷಣ ಕೊಡಿಸಿದರೆ ಅವರು ಆದರ್ಶರಾಗುತ್ತಾರೆ. ಆದರೆ ಇಂದು ಕೆಲವು ತಂದೆ ತಾಯಿಯರು ತಮ್ಮ ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಮನೆಯಲ್ಲಿ ಶಿಕ್ಷಣ ಕೊಡುತ್ತಿಲ್ಲ. ಇದರಿಂದಾಗಿ ಮಕ್ಕಳು ಹೊರಗಿನ ಪ್ರಪಂಚದ ಪ್ರಭಾವಕ್ಕೆ ಒಳಗಾಗುತ್ತಿದ್ದಾರೆ. ಗಾಂಧಿ ಅವರು ಪುಸ್ತಕದಿಂದ ಪಾಠ ಹೇಳಿಕೊಡುವುದಕ್ಕೆ ವಿರೋಧಿಸುತ್ತಿದ್ದುದುಂಟು.

ಗಾಂಧಿ ಅವರು ಭಾರತದ ಬಡತವನ್ನು ಅರಿತಿದ್ದವರು. ಇದರಿಂದಾಗಿ ವಿದ್ಯಾರ್ಥಿಗಳು ಕೇವಲ ಶಿಕ್ಷಣ ಪಡೆದುಕೊಂಡರೆ ದೇಹ ಶ್ರಮ ತಪ್ಪಿಹೋಗುತ್ತದೆ. ಅವರು ಅಕ್ಷರ ಜ್ಞಾನದ ಬಗ್ಗೆ ಮಾತನಾಡುತ್ತಾ-

> "ಅಕ್ಷರ ಜ್ಞಾನ ಸದಾ ಕಾಲದಲ್ಲಿಯು ಕೆಟ್ಟದೆಂದು ನಾನು ಹೇಳಲಿಲ್ಲ. ಬರೀ ಅಕ್ಷರಭ್ರಾಂತಿ ತಪ್ಪು ಎಂದು ಹೇಳುತ್ತಿದ್ದೇನೆ. ಅದು ನಮ್ಮ ಕಾಮಧೇನುವಲ್ಲ. ಅದರ ಮಿತಿಯಲ್ಲಿ ಅದು ಉಪಯುಕ್ತವೇ. ನಮ್ಮ ಇಂದ್ರಿಯಗಳನ್ನು ನಿಗ್ರಹಿಸಿ ನಮ್ಮ ನೀತಿಯ ತಳಹದಿಯನ್ನು ಬಲಪಡಿಸಿದ ಮೇಲೆ ಅದರಿಂದ ಉಪಯೋಗವಾದೀತು. ಆಗ ನಮಗೆ ಬೇಕೆನಿಸಿದರೆ ಅಕ್ಷರ ಜ್ಞಾನವನ್ನು ಪಡೆಯಬಹುದು. ಅದನ್ನು ಸರಿಯಾಗಿ ಉಪಯೋಗಿಸಬಹುದು. ಆಗ ನಮಗದು ಭೂಷಣವೋ ಆದೀತು. ಈ ಶಿಕ್ಷಣವನ್ನು ಬಲತ್ಕಾರ ಮಾಡಬೇಕಾಗಿಲ್ಲ. ನಮ್ಮ ಹಳೆಯ ಪಾಠ ಶಾಲೆಗಳ ಪದ್ಧತಿಯೇ ಸಾಕು. ಅದರಲ್ಲಿರುವ ಸದಾಚಾರ ಶಿಕ್ಷಣಕ್ಕೆ ಪ್ರಥಮ ಸ್ಥಾನ. ಅದು ಪ್ರಾಥಮಿಕ ಶಿಕ್ಷಣ. ಆ ತಳಹದಿಯ ಮೇಲೆ ಕಟ್ಟಿದ ಕಟ್ಟಡ ಭದ್ರ ಶಾಶ್ವತ"[೩]

-ಎಂದಿದ್ದಾರೆ. ಅಲ್ಲದೆ ಅವರು ಅಂದಿನ ಭಾರತದ ಜನರಲ್ಲಿದ್ದ ಬಡತನದಿಂದ ಶಿಕ್ಷಣ ಪಡೆಯುವುದು ಉಪಯುಕ್ತವಲ್ಲ. ಅವರು ಆರ್ಥಿಕವಾಗಿ ಉತ್ತಮರಾಗಬೇಕು. ಆಗ ಶಿಕ್ಷಣವನ್ನು ಪಡೆದರೆ ಸಮಾಜದಲ್ಲಿ ಭದ್ರವಾಗಿ ನೆಲೆನಿಲ್ಲಬಹುದು. ಈ ಉದ್ದೇಶಕ್ಕೆ ನಮ್ಮ ಹಳೆಯ ಪಾಠಶಾಲೆಗಳೇ ಸಾಕು ಎನ್ನುತ್ತಿದ್ದರು. ಅವರು ಮಕ್ಕಳಿಗೆ ಬಲಾತ್ಕರವಾಗಿ ಶಿಕ್ಷಣ ಕೊಡಿಸುವುದನ್ನು ವಿರೋಧಿಸುತ್ತಿದ್ದುದುಂಟು. ಅಲ್ಲದೆ ಅವರು ತಮ್ಮ ಧಾರ್ಮಿಕ ಮನೋಭಾವನೆಯಿಂದ ಸದಾಚಾರದ ಬಗ್ಗೆ ಹೆಚ್ಚು ಹೇಳುತ್ತಿದ್ದರು. ಗಾಂಧಿಯು ಪ್ರಾಥಮಿಕ ಶಿಕ್ಷಣಕ್ಕೆ ತಮ್ಮ ಹಳೆಯ ಪದ್ಧತಿಯಲ್ಲಿ ಕೊಡುವುದು ಸೂಕ್ತವೆಂದರು. ಇದಕ್ಕಾಗಿ ಭಾರತದಾದ್ಯಂತ ಉಚಿತ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೊಳಿಸಬೇಕು. ಇದರಿಂದ ಬಡ ರೈತರ ಮಕ್ಕಳು ಸಹ ಸೌಲಭ್ಯವನ್ನು ಪಡೆದುಕೊಳ್ಳುತ್ತಾರೆ ಎನ್ನುತ್ತಿದುದ್ದುಂಟು. ಶಿಕ್ಷಣವನ್ನು ಪಡೆದವರು ಸುಸಂಸ್ಕೃತರಾಗಿರಬೇಕು ಎಂದೂ ಆಶಿಸುತ್ತಿದ್ದರು. ಅವರು ಭಾರತದ ಹಳ್ಳಿಗಳಲ್ಲಿದ್ದಂಥ ಆದರ್ಶಜೀವನವು ಈಗಿನ ಶಿಕ್ಷಣ ವ್ಯವಸ್ಥೆಯಿಂದ ಮರೆತುಹೋಗುತ್ತದೆ. ಆದ್ದರಿಂದ ಹಳ್ಳಿಯ ಮಕ್ಕಳಿಗೆ ಅವರ ಮನಸ್ಸಿನಲ್ಲಿರುವ ಆದರ್ಶದ ಜೊತೆಗೆ ದೈಹಿಕ ಮತ್ತು ನೈತಿಕ ಬೆಳವಣಿಗೆಯ ಶಿಕ್ಷಣವನ್ನು ಕೊಡಿಸುವುದು ಸೂಕ್ತ ಎನ್ನುತ್ತಿದ್ದರು. ಒಟ್ಟಾರೆ ಗಾಂಧಿ ರಾಷ್ಟ್ರೀಯವಾದಂಥ ದೇಶೀ ಶಿಕ್ಷಣ ಪದ್ಧತಿಯ ಬೆಂಬಲಿಗರು.

ಆದರೆ ವಿಶ್ವೇಶ್ವರಯ್ಯ ಅವರು ಗಾಂಧಿ ಅವರಿಗಿಂತ ಭಿನ್ನಬಗೆಯಲ್ಲಿ ಆಲೋಚಿಸುತ್ತಿದ್ದರು. ಇವರು ಮೈಸೂರಿನ ದಿವಾನರಾದ ತಕ್ಷಣ ಆಧುನಿಕ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಇವರು ವಿದೇಶಿಗಳಿಗೆ ಭೇಟಿ ನೀಡಿದ್ದರಿಂದ ಅಲ್ಲಿನ ಶಿಕ್ಷಣ ಪ್ರಗತಿಯನ್ನು ಗಮನಿಸಿದ್ದರು. ಅದಕ್ಕಾಗಿ ಅದೇ ರೀತಿಯ ಶಿಕ್ಷಣ ವ್ಯವಸ್ಥೆಯನ್ನು ಮೈಸೂರು ಸಂಸ್ಥಾನದಲ್ಲೂ ಜಾರಿಗೆ ತರಲು ಪ್ರಯತ್ನಿಸಿದರು. ಅವರು ಸಂಪತ್ತಭಿವೃದ್ಧಿ ಸಮಾಜವನ್ನು ಸ್ಥಾಪಿಸಿದ ನಂತರ ಆ ಸಭೆಯಲ್ಲಿ ಮಾತನಾಡುತ್ತಾ-

> "ನಮ್ಮ ಮೈಸೂರಿನಲ್ಲಿ ಶೇ. ೭ರಷ್ಟು ಮಂದಿಮಾತ್ರ ಓದು ಬರಹ ಕಲಿತವರಿದ್ದಾರೆ. ಮುಂದುವರೆದ ರಾಷ್ಟ್ರಗಳೆಲ್ಲ ಶೇ. ೮೫ ರಿಂದ ೯೫ ರವರೆಗೆ ಓದು ಬರಹ ಬಲ್ಲವರಾಗಿದ್ದಾರೆ. ಅಮೇರಿಕಾದಲ್ಲಿ ಶಿಕ್ಷಣಕ್ಕಾಗಿ ಪ್ರತಿಯೊಬ್ಬ ಪ್ರಜೆಗೂ ಹದಿನಾಲ್ಕು ರೂ.ನಂತೆ ಖರ್ಚಾಗುತ್ತಿದೆ. ಆದರೆ ಮೈಸೂರಿನಲ್ಲಿ ಪ್ರತಿಯೊಬ್ಬರಿಗೂ ಆರು ಆಣೆ ಮಾತ್ರ ಖರ್ಚಾಗುತ್ತಿದೆ. ಮುಂದುವರೆದಿರುವ ಪರದೇಶಗಳಲ್ಲಿ ಆಯಾ ಜನಸಂಖ್ಯೆಯಲ್ಲಿ ೧/೫ ಭಾಗದಷ್ಟು ಬಾಲಕರು ಶಾಲೆಗಳಲ್ಲಿ ಓದುತ್ತಿದ್ದರೆ ಮೈಸೂರಿನಲ್ಲಿ ೧/೫೦ ಭಾಗದಷ್ಟು ಮಾತ್ರ ಓದುತ್ತಾರ"[೧೪]

-ಎಂದು ಅವರು ವಿದೇಶಗಳ ಶಿಕ್ಷಣದ ಅಂಕಿ ಅಂಶಗಳ ಜೊತೆಗೆ ಮೈಸೂರಿನ ಶಿಕ್ಷಣವನ್ನು ಹೋಲಿಸಿ ನೋಡಿದ್ದರು. ಅಲ್ಲದೆ ವಿದೇಶಗಳಲ್ಲಿರುವ ಶಿಕ್ಷಣ ವ್ಯವಸ್ಥೆಯನ್ನು ಕೂಲಂಕಷವಾಗಿ ವಿವರಿಸಿ ಅದರ ಅರಿವನ್ನು ಮೂಡಿಸುತ್ತಿದ್ದರು. ಶಿಕ್ಷಣದ ಅರಿವನ್ನು ಜನರಲ್ಲಿ ಮೂಡಿಸುವುದಕ್ಕೆ ಅನೇಕ ಕಾರ್ಯಕ್ರಮ ಗಳನ್ನು ರೂಪಿಸಿದ್ದರು.

ವಿಶ್ವೇಶ್ವರಯ್ಯ ಅವರು ಸರ್ಕಾರದ ವತಿಯಿಂದ ಅನೇಕ ಪಾಠ ಶಾಲೆಗಳನ್ನು ತೆರೆದರು. ಅಲ್ಲದೆ ಖಾಸಗಿಯವರು ನಡೆಸುತ್ತಿದ್ದ ಶಾಲೆಗಳಿಗೂ ಅನುಧಾನವನ್ನು ಕಲ್ಪಿಸಿಕೊಡಲಾಯಿತು. ಇದರಿಂದಾಗಿ ಬಡ ಜನರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಪ್ರಾರಂಭಿಸಿದರು. ಇವರು ಹಿಂದುಳಿದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮತ್ತು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿಕೊಟ್ಟರು. ಇದಲ್ಲದೆ ಗ್ರಾಮೀಣ ಜನರಿಗೂ ಶಿಕ್ಷಣ ವ್ಯವಸ್ಥೆಯನ್ನು ವಿಸ್ತರಿಸಿದರು. ಏಳು ವರ್ಷಕ್ಕಿಂತ ಕಡಿಮೆ ಇರದ ಹನ್ನೊಂದು ವರ್ಷಕ್ಕಿಂತ ಮೇಲ್ಪಟ್ಟ ಎಲ್ಲ ಮಕ್ಕಳಿಗೂ ಕಡ್ಡಾಯ ಶಿಕ್ಷಣ ಪದ್ಧತಿಯನ್ನು ಜಾರಿಗೆ ತಂದರು. ಹೀಗಾಗಿ ಮೈಸೂರು ಸಂಸ್ಥಾನದಲ್ಲಿ ಹೆಚ್ಚು ಜನರು ಶಿಕ್ಷಣ ಪಡೆಯಲು ಸಹಕಾರಿ ಆಯಿತು.

ವಿಶ್ವೇಶ್ವರಯ್ಯ ಅವರು ಶಿಕ್ಷಣಕ್ಕೆ ಸಂಬಂಧಿಸಿದಂತೆ ೧೯೧೨ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಮಾತನಾಡುತ್ತಾ-

> "ಒಂದು ಅನಾಗರಿಕ ಜನಾಂಗದಿಂದ ನಾಗರಿಕ ಜನಾಂಗವನ್ನು ಬೇರ್ಪಡಿಸಿ ಗುರುತಿಸಲು ಇರುವ ಮುಖ್ಯ ಲಕ್ಷಣವೇ ಅದು ಹೊಂದಿರುವ ಮಹತ್ತರ ಬುದ್ಧಿಮತ್ತೆ ಮತ್ತು ಕುಶಲತೆ"[೧೫]

-ಎಂದು ಹೇಳುವುದರ ಮೂಲಕ ಶಿಕ್ಷಣದ ಮಹತ್ತ್ವವನ್ನು ತಿಳಿಸಿದ್ದಾರೆ.

ಉನ್ನತ ಶಿಕ್ಷಣ ವ್ಯವಸ್ಥೆಯು ಅತ್ಯಂತ ಪ್ರಮುಖವಾದ ಹಂತ. ಈ ಹಂತದಲ್ಲಿ ಭಾರತದಲ್ಲಿ ಅಂದು ಸರಿಯಾದ ವ್ಯವಸ್ಥೆ ಇರಲಿಲ್ಲ. ಇದರ ಬಗ್ಗೆ ಆಲೋಚಿಸಿದ್ದ ಗಾಂಧಿ ಅವರು-

> "ಟಾಟಾ ಕಂಪನಿಯವರು ಸರ್ಕಾರದ ಮೇಲ್ವಿಚಾರಣೆಯಲ್ಲಿ ನಡೆಯುವ ಕಾಲೇಜ್ ಒಂದನ್ನು ಏರ್ಪಡಿಸುವಂತೆ ನಿರೀಕ್ಷಿಸಲಾಗುತ್ತದೆ. ಗಿರಣಿ ಸಂಘಗಳೂ ತಮ್ಮ ಅಗತ್ಯವಾದ ಪದವೀಧರ ಶಿಕ್ಷಣಕ್ಕಾಗಿ ತಮ್ಮಲ್ಲಿಯೇ ಒಂದು ಕಾಲೇಜನ್ನು ಸ್ಥಾಪಿಸುತ್ತಾರೆ. ಹೀಗೆ ಯಾವ ಕೈಗಾರಿಕೆಯ ವಿಷಯದಲ್ಲಾದರೂ ಇದೇ ಕ್ರಮವನ್ನು ಅನುಸರಿಸಲಾಗುತ್ತಿದೆ, ವಾಣಿಜ್ಯ ಸಂಸ್ಥೆಗಳು ತಮ್ಮದೇ ಕಾಲೇಜನ್ನು ಸ್ಥಾಪಿಸುತ್ತಾರೆ. ಲಲಿತಕಲೆಗಳು, ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಅನೇಕ ಖಾಸಗಿ ಕಾಲೇಜುಗಳಿವೆ. ಅವು ತಮ್ಮ ಕಾಲ ಮೇಲೆ ತಾವು ನಿಂತಿವೆ. ಸರ್ಕಾರ ಅವುಗಳನ್ನು ನಡೆಸುವುದು ನಿಲ್ಲಬೇಕು"[೧೬]

-ಎಂದಿದ್ದಾರೆ. ಗಾಂಧಿ ಅವರು ಉನ್ನತ ಶಿಕ್ಷಣ ವ್ಯವಸ್ಥೆಗೂ ಆದ್ಯತೆ ಕೊಟ್ಟಿದ್ದರು. ಕೈಗಾರಿಕೆಗಳು ತಮಗೆ ಬೇಕಾದ ಪದವೀಧರ ಕಾಲೇಜುಗಳನ್ನು ಸ್ಥಾಪಿಸಿಕೊಂಡು ಶಿಕ್ಷಣ ನೀಡಿ ಹೊಂದಬಹುದು. ಅಲ್ಲದೆ ಅವುಗಳನ್ನು ನಡೆಸುವ ಶಿಕ್ಷಣ ಸಂಸ್ಥೆಗಳನ್ನು ಸರ್ಕಾರಗಳು ನಡೆಸಬಾರದು ಎಂದಿದ್ದಾರೆ. ಗಾಂಧಿ ಸಹ ಖಾಸಗೀ ಶಿಕ್ಷಣ ಸಂಸ್ಥೆಗಳಿಗೆ ಆದ್ಯತೆ ಕೊಟ್ಟಿದ್ದರು. ಅದು ಪ್ರಮುಖವಾಗಿ ಟಾಟಾ ಕಂಪನಿಯವರು ಕೈಗಾರಿಕಾ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಲು ಮುಂದಾಗಿದ್ದರು. ಟಾಟಾಕಂಪನಿಯವರು ಗಾಂಧಿಯವರ ಸ್ನೇಹಿತರಾಗಿದ್ದರಿಂದ ಅವರು ಖಾಸಗಿ ಶಿಕ್ಷಣ ಸಂಸ್ಥೆಯನ್ನು ಒಪ್ಪಿಕೊಂಡಿದ್ದರು. ಆದರೆ ಅವರು ಏಕೆ ಖಾಸಗಿ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡಲಿಲ್ಲ ಎಂಬ ಪ್ರಶ್ನೆ ಹಾಗೆಯೇ ಇದೆ. ಖಾಸಗಿ ಶಿಕ್ಷಣ ಸಂಸ್ಥೆಗಳು ಇಂದಿಗೂ ಡೊನೇಷನ್ ಎಂಬ ಅಂಟು ರೋಗದಿಂದ ಮುಕ್ತ ಆಗಿಲ್ಲ. ಇದರಿಂದ

ಬಡ ಜನರಿಗೆ ಖಾಸಗಿ ಸಂಸ್ಥೆಗಳಲ್ಲಿ ಶಿಕ್ಷಣ ಸೌಲಭ್ಯ ದೊರೆಯುತ್ತಿಲ್ಲ. ಅವರು ಸರ್ಕಾರಿ ಕಾಲೇಜುಗಳಲ್ಲಿ ಮಾತ್ರ ಶಿಕ್ಷಣ ಪಡೆಯಬೇಕಾಗಿದೆ.

ಗಾಂಧಿ ಅವರು ಇಡೀ ಶಿಕ್ಷಣ ವ್ಯವಸ್ಥೆಯ ಮೇಲ್ವಿಚಾರಣೆ ನೋಡಿಕೊಳ್ಳಲು ವಿಶ್ವವಿದ್ಯಾಲಯದ ಆದ್ಯತೆಯನ್ನು ಗುರುತಿಸಿದ್ದರು. ಅಲ್ಲದೆ ಅವರು ವಿಶ್ವವಿದ್ಯಾಲಯಗಳು ಸ್ವಾವಲಂಬಿಯಾಗಿರಬೇಕು. ತಮ್ಮ ಖರ್ಚನ್ನು ಪರೀಕ್ಷೆ ಶುಲ್ಕದಿಂದ ನೀಗಿಸಿಕೊಳ್ಳಬೇಕು. ಈ ಶಿಕ್ಷಣ ವ್ಯವಸ್ಥೆಯನ್ನು ಸಮರ್ಪಕವಾಗಿ ನಿರ್ವಹಿಸಲು ಇಲಾಖೆಗಳನ್ನು ಸ್ಥಾಪಿಸಿ ಅವುಗಳಿಂದ ನಿಯಂತ್ರಿಸಬೇಕು ಎಂದಿದ್ದಾರೆ. ಗಾಂಧಿ ಅವರಿಗೆ ತಮ್ಮ ಮಾತೃಭಾಷೆಯ ಬಗ್ಗೆ ತುಂಬ ಅಭಿಮಾನವಿತ್ತು. ಅದಕ್ಕಾಗಿ ಅವರು ತಮ್ಮ ಮಾತೃಭಾಷೆಯಾದ ಗುಜರಾತಿನಲ್ಲೇ ಹೆಚ್ಚಿನ ವ್ಯವಹಾರ ಮಾಡುತ್ತಿದ್ದರು. ಇವರು ಭಾರತದಲ್ಲಿದ್ದಂಥಹ ಬಹು ಭಾಷೆಗಳ ಅರಿವಿನಿಂದಾಗಿ ಆಯಾ ಸಂಸ್ಥಾನಗಳು ತಮ್ಮ ಪ್ರಾದೇಶಿಕ ಭಾಷೆಗಳಲ್ಲೂ ಶಿಕ್ಷಣ ಕೊಡಬೇಕು. ಆದರೆ ರಾಷ್ಟ್ರೀಯ ಭಾಷೆಯಾಗಿ ಭಾರತೀಯರು ಹಿಂದಿಯನ್ನು ಕಲಿಯಬೇಕು ಎನ್ನುತ್ತಿದುದ್ದುಂಟು. ಗಾಂಧಿ ಅವರಿಗೆ ಇಂಗ್ಲಿಷ್ ಭಾಷೆಯ ಅರಿವಿತ್ತು. ಅವರು ಅದು ಅಂತರರಾಷ್ಟ್ರೀಯ ಭಾಷೆ. ಅದು ನಮ್ಮ ರಾಷ್ಟ್ರ ಭಾಷೆಯಾಗದು. ಆದರೆ ಅಂತರರಾಷ್ಟ್ರೀಯ ಮಟ್ಟದಲ್ಲಿ ವ್ಯವಹರಿಸಲು ಮಾತ್ರ ಅದನ್ನು ಬಳಸಬಹುದು. ಆದರೆ ನಮ್ಮ ಭಾರತದ ಭಾಷೆ ಹಿಂದೂಸ್ಥಾನಿ (ಹಿಂದಿ)ಯಾಗಬೇಕು ಎನ್ನುತ್ತಿದ್ದರು.[೧೬] ಗಾಂಧಿ ಅವರು ತಮ್ಮ ಚಿಂತನೆಗಳನ್ನು ಹೊರಹಾಕುತ್ತಿದ್ದರು. ಅವರು ತಮ್ಮ ಚಿಂತನೆ ಆಲೋಚನೆಗಳಿಂದ ಭಾರತದ ಭವ್ಯ ಇತಿಹಾಸದ ಕನಸನ್ನು ಕಾಣುತ್ತಿದುದ್ದುಂಟು. ಆದರೆ ವಿಶ್ವೇಶ್ವರಯ್ಯ ಅವರು ಕನಸ್ಸನ್ನು ಕಾಣದೆ ದಿವಾನರಾಗಿ ತಾವು ಅಂದು ಕೊಂಡಂತೆ ಯೋಜನೆ ಹಾಕಿ ಕಾರ್ಯಗತಗೊಳಿಸುತ್ತಿದ್ದರು. ಇವರು ಪ್ರಮುಖವಾಗಿ ತಾಂತ್ರಿಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಟ್ಟರು. ಅವರು ಮೈಸೂರು ಸಂಸ್ಥಾನದಲ್ಲಿ ಅನೇಕ ತಾಂತ್ರಿಕ ಕಾಲೇಜಗಳ ಸ್ಥಾಪನೆಗೆ ಕಾರಣರಾದರು. ಇವರ ಕಾಲದಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯನ್ನು ಮೈಸೂರಿನಲ್ಲೂ, ಮೆಕ್ಯಾನಿಕಲ್ ಇಂಜಿನಿಯರಿಂಗ್ ಸ್ಕೂಲ್ ಎಂಬುದನ್ನು ಬೆಂಗಳೂರಿನಲ್ಲೂ ಸ್ಥಾಪಿಸಿದ್ದುಂಟು.

ಶಿಕ್ಷಣದ ವ್ಯವಸ್ಥೆಯನ್ನು ನೋಡಿಕೊಳ್ಳಲು ಇನ್‌ಸ್ಪೆಕ್ಟರ್-ಜನರಲ್‌ಗಳನ್ನು ನೇಮಿಸಿದರು. ಅನೇಕ ಸಮಿತಿಗಳನ್ನು ಸ್ಥಾಪಿಸಿ ಅವುಗಳಿಗೆ ಶಿಕ್ಷಣದ ವ್ಯವಸ್ಥೆಯನ್ನು ವಹಿಸಲಾಯಿತು. ವಿದ್ಯಾರ್ಥಿಗಳಿಗೆ ಸರಿಯಾದ ಶಿಕ್ಷಣ ಕೊಡುವಂತೆ ಉಪಧ್ಯಾಯರಿಗೆ ಹೆಚ್ಚಿನ ಸಂಬಳವನ್ನು ಸರ್ಕಾರದ ವತಿಯಿಂದ ಕಲ್ಪಿಸಿಕೊಟ್ಟರು. ವಿಶ್ವೇಶ್ವರಯ್ಯ ಅವರು ಈ ಎಲ್ಲ ಶಿಕ್ಷಣವ್ಯವಸ್ಥೆಯನ್ನು ನೋಡಿಕೊಳ್ಳಲು ವಿಶ್ವವಿದ್ಯಾನಿಲಯದ ಅವಶ್ಯಕತೆಯನ್ನು ಮನಗಂಡಿದ್ದರು. ವಿದೇಶಗಳಿಗೆ ಹೋಗಿ ಬಂದ ಸಮಯದಲ್ಲಿ ಈ ವಿಷಯ ಕುರಿತು ಮಹಾರಾಜರಲ್ಲಿ ಪ್ರಸ್ತಾಪಿಸುತ್ತಿದ್ದರು. ಅವರು ೧೯೧೪ರಲ್ಲಿ ನಡೆಸಿದ ಆರ್ಥಿಕ ಪರಿಷತ್ತಿನ ನಾಲ್ಕನೆಯ ಅಧಿವೇಶನದಲ್ಲಿ ಮಾತನಾಡುತ್ತಾ-

"ನಾವು ಸುಮಾರು ಆರು ಮಿಲಿಯನ್ ಜನಸಂಖ್ಯೆಯನ್ನು ಹೊಂದಿದ್ದರೂ ಮೈಸೂರಿನಲ್ಲಿ ವಿಶ್ವವಿದ್ಯಾನಿಲಯಗಳಿಲ್ಲ, ಕೆನಡಾದಲ್ಲಿ ಹೆಚ್ಚುಕಮ್ಮಿ ಶೇಕಡ ೨೫ರಷ್ಟು ಜನಸಂಖ್ಯೆ ಇದ್ದರೂ ಸಹ ಅಲ್ಲಿ ೨೦ ವಿಶ್ವವಿದ್ಯಾನಿಲಯಗಳಿವೆ. ಜಪಾನಿನಲ್ಲಿ ೬೫ ಮಿಲಿಯನ್ ಜನಸಂಖ್ಯೆ ಇರುವಲ್ಲಿ ೨೧ ವಿಶ್ವವಿದ್ಯಾನಿಲಯಗಳಿವೆ. ಬ್ರಿಟನ್ನಿನಲ್ಲಿ ೪೫ ಲಕ್ಷ ಪ್ರಜೆಗಳಿದ್ದರೂ ತಲಾ ೨೦ ವಿಶ್ವವಿದ್ಯಾನಿಲಯಗಳಿವೆ"[೧೯]

-ಎಂದು ಹೇಳಿದರು. ಅಂದು ಮೈಸೂರು ಸಂಸ್ಥಾನದ ಶಿಕ್ಷಣ ವ್ಯವಸ್ಥೆಯನ್ನು ಮದ್ರಾಸ್ ವಿಶ್ವವಿದ್ಯಾಲನಿಲಯ ನೋಡಿಕೊಳ್ಳುತ್ತಿತ್ತು. ಇದರಿಂದ ಬಿಡುಗಡೆ ಹೊಂದಲು ಮೈಸೂರಿನಲ್ಲಿ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ಒಂದು ಸಮಿತಿಯನ್ನು ನೇಮಿಸಿದರು. ತದನಂತರ ೧೯೧೬ರ ಜುಲೈ ೭ರಂದು ಸಂಸ್ಥಾನದಲ್ಲಿ ಸ್ವತಂತ್ರವಾಗಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು.[೨೦] ಇದು ಇಂದು ಶಿಕ್ಷಣ ರಂಗದಲ್ಲಿ ಏಷ್ಯಾ ಖಂಡದಲ್ಲೇ ಐದನೆಯ ಸ್ಥಾನವನ್ನು ಪಡೆದಿದೆ.

ವಿಶ್ವೇಶ್ವರಯ್ಯನವರು ಸಂಸ್ಥಾನದ ಭಾಷೆಯನ್ನು ಅಭಿವೃದ್ಧಿಗೊಳಿಸಲು ಕನ್ನಡ ಸಾಹಿತ್ಯ ಪರಿಷತ್ತನ್ನು ಸ್ಥಾಪಿಸಿದರು. ಇದರಿಂದಾಗಿ ಕನ್ನಡದ ಕಲೆ, ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಪ್ರೋತ್ಸಾಹ ಸಿಕ್ಕಿತು. ಇದಲ್ಲದೆ ವಿಶ್ವೇಶ್ವರಯ್ಯನವರು ಕನ್ನಡ ಭಾಷೆಯ ಜೊತೆಗೆ ಇಂಗ್ಲಿಷ್ ಭಾಷೆಗೂ ಹೆಚ್ಚಿನ ಆದ್ಯತೆ ಕೊಟ್ಟಿದ್ದರು.

ಗಾಂಧಿ ಮತ್ತು ವಿಶ್ವೇಶ್ವರಯ್ಯನವರು ಮಹಿಳೆಯರ ಶಿಕ್ಷಣಕ್ಕೂ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದರು. ಅಂದು ಮಹಿಳೆಯರನ್ನು ಶಾಲೆಗೆ ಕಳುಹಿಸುತ್ತಿರಲಿಲ್ಲ. ಅಲ್ಲದೆ ಅವರಿಗೆ ಸರಿಯಾದ ಸೌಲಭ್ಯವನ್ನು ಸಹ ಮನೆಯಲ್ಲಿಯು ತಂದೆ ತಾಯಿಗಳು ಕೊಡುತ್ತಿರಲಿಲ್ಲ. ಮಹಿಳೆ ಎಂದರೆ ಕೇವಲ ಭೋಗದ ವಸ್ತು, ಮನೆಕೆಲಸದವಳು ಎಂಬ ಧೋರಣೆಗಳಿದ್ದವು. ಆದರಿಂದ ಬಿಡುಗಡೆ ಹೊಂದಲು ಅವರಿಗೂ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಿಕೊಡಲು ವಿಶ್ವೇಶ್ವರಯ್ಯನವರು ಮುಂದಾದರು. ಮಹಿಳೆಯರಿಗೆ ಪ್ರತ್ಯೇಕವಾದ ಶಾಲೆಯನ್ನು ೧೯೧೩ರಲ್ಲಿ ವಾಣಿವಿಲಾಸ ಬಾಲಕಿಯರ ಶಾಲೆ ಎಂಬ ಹೆಸರಿನಲ್ಲಿ ತೆರೆದರು.[೨೧] ಈ ಸಂಸ್ಥೆಯಿಂದ ಮಹಿಳೆಯರಿಗೆ ಹೆಚ್ಚಿನ ಶಿಕ್ಷಣ ವ್ಯವಸ್ಥೆ ದೊರಕುವಂತೆ ಆಯಿತು. ಅಲ್ಲದೇ ವಿಶ್ವೇಶ್ವರಯ್ಯನವರು ಮಹಿಳೆಯರ ಉನ್ನತ ಶಿಕ್ಷಣಕ್ಕೂ ಆದ್ಯತೆ ಕೊಟ್ಟರು. ಅದಕ್ಕಾಗಿ ೧೯೧೭ರಲ್ಲಿ ಮೈಸೂರಿನ ಮಹಾರಾಣಿಯವರ ಕಾಲೇಜನ್ನು ಪ್ರಥಮ ದರ್ಜೆಗೆ ಏರಿಸಲಾಯಿತು.[೨೨] ಇದರಿಂದ ಮೈಸೂರು ಸಂಸ್ಥಾನವು ಮಹಿಳೆಯರಿಗೆ ಹೆಚ್ಚಿನ ಶಿಕ್ಷಣ ಕೊಡುವಂತಾಯಿತು. ಶಿಕ್ಷಣದ ಮಹತ್ವ ಅರಿತ ತಾಯಿಯರು ಮಹಿಳೆಯರನ್ನು ಕಾಲೇಜುಗಳಿಗೆ ಕಳುಹಿಸಿಕೊಡಲು ಪ್ರಾರಂಭಿಸಿದರು.

ಗಾಂಧಿ ಅವರು ಸಹ ಮಹಿಳೆಯ ಶಿಕ್ಷಣಕ್ಕೆ ಆದ್ಯತೆ ನೀಡಿದ್ದರೂ ಸಹ, ಮಹಿಳೆಯರ ಅವಶ್ಯಕತೆ ಇರುವಷ್ಟು ಮಾತ್ರ ಶಿಕ್ಷಣ ಪಡೆಯಬೇಕು. ಅದು ತಮ್ಮ ಮಕ್ಕಳನ್ನು ಸಾಕಿ, ಸಲುಹಿ ವಿದ್ಯೆ ಕಲಿಸುವಷ್ಟು ಇದ್ದರೆ ಸಾಕು ಎಂಬ ನಿಲುವನ್ನು ಹೊಂದಿದ್ದರು. ಅವರು ಸ್ತ್ರೀಯರ ಶಿಕ್ಷಣಕ್ಕೆ ಸಂಬಂಧಿಸಿದಂತೆ-

"ಸ್ತ್ರೀಯರಿಗೆ ಸರಿಯಾದ ಶಿಕ್ಷಣ ಕೊಡಬೇಕೆಂಬುದರಲ್ಲಿ ನನಗೆ ವಿಶ್ವಾಸವಿದೆ. ಆದರೆ ವಿಶ್ವ ಜೀವನಕ್ಕೆ ಹೆಂಗಸು ತನ್ನ ಕಾಣಿಕೆಯನ್ನು ಸಲ್ಲಿಸುವುದು ಗಂಡಸರೊಂದಿಗೆ ಪಂಥಕಟ್ಟಿ ಓಡುವುದರಿಂದಾಗಲಿ, ಅವರನ್ನು ಅಣಕಿಸುವುದರಿಂದಾಗಲಿ ಸಾಧ್ಯವಿಲ್ಲವೆಂಬುದನ್ನು ನಾವು ನಂಬುತ್ತೇನೆ. ಅವಳು ಪಂಥದಲ್ಲಿ ಗೆದ್ದಳು. ಆದರೆ ಗಂಡಸನ್ನು ಅನುಕರಿಸುವುದರ ಮೂಲಕ ತಾನು ಏರಲರ್ಹವಾದ ಮಹಾಶಿಖರಗಳನ್ನು ಏರಲಾರಳು. ಅವಳು ಗಂಡಸಿನ ಬದುಕಿಗೆ ಪೂರಕದಂತಿರಬೇಕು"[೨೩]

-ಎಂದಿದ್ದಾರೆ. ಶಿಕ್ಷಣ ಪಡೆದ ಮಹಿಳೆ ಪುರುಷರಿಗೆ ಪೂರಕವಾಗಿದ್ದು ಆಸರೆಯಾಗಿರಬೇಕು ಎಂಬ ಅವರ ನಿಲವು ಸಮಂಜಸವಾದುದಲ್ಲ. ಅವಳು ಸಹ ಪುರುಷನ ಆಸರೆ ಇಲ್ಲದೆ ಬದುಕಬಲ್ಲಳು. ಅವಳು ಅಬಲೆಯಲ್ಲ. ಗಾಂಧಿ ತಮ್ಮ ಚಿಂತನೆಯಲ್ಲಿ ಗಂಡಿನ ಪರವಹಿಸಿರುವುದೇ ಹೆಚ್ಚು. ಅವರ ಕಾಲದಲ್ಲಿಯೇ ಸರೋಜನಿ ನಾಯ್ಡು ಅವರಂಥ ಧೀಮಂತ ಮಹಿಳೆಯರು ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದುದನ್ನು ಮರೆತಿದ್ದಾರೆ.

ಇಂದು ಮಹಿಳೆಯು ಗಂಡಿಗೆ ಸಮಾನಳು ಎಂದು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಅಲ್ಲದೆ ಅವಳು ಎಲ್ಲ ಕ್ಷೇತ್ರಗಳಲ್ಲೂ ಗಂಡಿಗೆ ಸಮನಾಗಿ ಮೇಲೆರುತ್ತಿದ್ದಾಳೆ. ಇಂದಿರಾ ಗಾಂಧಿ ಪ್ರಧಾನ ಮಂತ್ರಿಯಾಗಿ ಭಾರತವನ್ನು ಯಾವುದೇ ಗಂಡಸರಿಗಿಂತಲೂ ದಕ್ಷವಾಗಿ ಆಡಳಿತ ನಡೆಸಿದ್ದುಂಟು. ಭಾರತವು ಮಹಿಳೆಯರಿಗೆ ಇನ್ನು ಹೆಚ್ಚಿನ ಸೌಲಭ್ಯ ಕಲ್ಪಿಸಿಕೊಟ್ಟರೆ ಅವರು ಉನ್ನತಮಟ್ಟಕ್ಕೇರಲು ಸಾಧ್ಯ ಆಗುತ್ತದೆ ಎಂಬುದು ಮುಖ್ಯ.

## ೩.೫. ಸಾರಿಗೆ-ಸಂಪರ್ಕ

ಯಾವುದೇ ದೇಶದ ಆಡಳಿತವನ್ನು ನಡೆಸಲು ಸಮರ್ಪಕವಾದ ಸಾರಿಗೆ ಸಂಪರ್ಕ ವ್ಯವಸ್ಥೆಯು ಬಹಳ ಮುಖ್ಯ. ಈ ಸಂಪರ್ಕ ವ್ಯವಸ್ಥೆಯಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಲು ಸಾಧ್ಯ. ಆಗ ಮಾತ್ರ ಆ ದೇಶವು ಪ್ರಗತಿ ಹೊಂದಲು ಸಹಕಾರಿಯಾಗುತ್ತದೆ. ಆದರೆ ಭಾರತವು ಪುರಾತನ ಕಾಲದಿಂದಲೂ ಸಾರಿಗೆ ಸಂಪರ್ಕವನ್ನು ಸರಿಯಾಗಿ ಹೊಂದಿಲ್ಲ. ಇಂದು ಸಹ ಎಷ್ಟೋ ಹಳ್ಳಿಗಳಿಗೆ ಸರಿಯಾದ ಸಾರಿಗೆ ಸಂಪರ್ಕ ಇಲ್ಲದಿರುವುದನ್ನು ಕಾಣಬಹುದು. ಆಂಗ್ಲರು ಭಾರತವನ್ನು ಆಕ್ರಮಿಸಿಕೊಂಡ ನಂತರ ತಮ್ಮ ಆಡಳಿತ ನಡೆಸಲು ಸಾರಿಗೆ ಸಂಪರ್ಕವನ್ನು, ಅದರಲ್ಲೂ ಹೆಚ್ಚಾಗಿ ರೈಲು ಹಳಿಗಳನ್ನು ಹಾಕಿಸಿದರು. ರೈಲು ಸಂಪರ್ಕವು ಸುಲಭವಾಗಿ ರೈತರಿಗೆ ದೊರೆಯುವ ಒಂದು ಸಾರಿಗೆ. ಇದರಿಂದ ರೈತರು ತಾವು ಬೆಳೆದ ಉತ್ಪನ್ನಗಳನ್ನು ಮಾರುಕಟ್ಟೆಗೆ ಸಾಗಿಸಲು ಸಾಧ್ಯವಾಗಿದೆ. ರೈಲು ವ್ಯವಸ್ಥೆಯಿಂದ ಸರ್ಕಾರಕ್ಕೂ ಹೆಚ್ಚಿನ ಆದಾಯವೂ ದೊರೆಯುತ್ತದೆ. ಆದರೆ ಆಂಗ್ಲರು ಪ್ರಮುಖವಾಗಿ ಈ ರೈಲ್ವೆ ಸಂಪರ್ಕ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟಿದ್ದು ಇಲ್ಲಿನ ಪದಾರ್ಥಗಳನ್ನು ಹಾಗೂ ಸೈನ್ಯವನ್ನು ಸಾಗಿಸುವುದಕ್ಕಾಗಿ. ಹೀಗಾಗಿ ಗಾಂಧಿ ಅವರು ಈ ರೈಲ್ವೆ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದುಂಟು. ಅವರೇ ಹೇಳಿದಂತೆ-

"ಭಾರತಕ್ಕೆ ರೈಲುಗಳು ಬಂದಿದ್ದರಿಂದ ಜನರಿಗೆ ಅಂಟುರೋಗ ಬಂದಿದೆ. ರೈಲು ಇರದಿದ್ದರೆ ಈ ರೋಗವು ಬರುತ್ತಿರಲಿಲ್ಲ. ಅಲ್ಲದೆ ಬ್ರಿಟಿಷರು ಈ ರೈಲು ಮಾರ್ಗಗಳನ್ನು ಹಾಕಿಸಿದ್ದು ನಮ್ಮ ದೇಶದ ಆಳ್ವಿಕೆಯನ್ನು ನಡೆಸುವುದಕ್ಕೆ ಮತ್ತು ಇಲ್ಲಿನ ಸಂಪತ್ತನ್ನು ದೋಚಿಕೊಂಡು ಹೋಗುತ್ತಿದ್ದಾರೆ. ಇದರಿಂದಾಗಿ ಜನರು ಸಂಪತ್ತನ್ನು ಕಳೆದುಕೊಳ್ಳುತ್ತಿದ್ದಾರೆ. ಅಲ್ಲದೆ ಬರಗಾಲದ ಸಂದರ್ಭದಲ್ಲೂ ರೈತರಲ್ಲಿ ಕಾಳುಕಡ್ಡಿಯಂತವು ಉಳಿಯುತ್ತಿಲ್ಲ. ಈ ರೈಲ್ವೆಯಿಂದ ಭಾರತೀಯರಲ್ಲಿ ಭೇದಭಾವಗಳನ್ನು ಆಂಗ್ಲರು ಸೃಷ್ಟಿಮಾಡಿದರು"[೨೪]

-ಎಂದಿದ್ದಾರೆ. ಅವರು ಹೇಳಿರುವುದು ತುಂಬ ಸಮಂಜಸವಾಗಿದೆ. ಈ ರೈಲು ಸಂಪರ್ಕದಿಂದ ನಮ್ಮ ಸಂಪತ್ತನ್ನು ಇಂಗ್ಲೆಂಡಿಗೆ ದೋಚಿಕೊಂಡು ಹೋದರು. ಅದರಲ್ಲೂ ಅಂದು ಇದ್ದಂಥಹ ಕಾಲರಾ, ಪ್ಲೇಗು, ಸಿಡುಬು ಇನ್ನು ಮುಂತಾದ ಸಂಕ್ರಾಮಿಕ ರೋಗಗಳು ಹರಡಿದವು. ರೈಲು ಪ್ರಯಾಣದಿಂದ ಈ ರೋಗಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹರಡಲು ಅನುಕೂಲವಾಗಿತ್ತು. ಆದ್ದರಿಂದಲೇ ಅವರು ರೈಲು ವ್ಯವಸ್ಥೆಯನ್ನು ವಿರೋಧಿಸುತ್ತಿದ್ದುದು. ಆದರೆ ಇಂದು ರೈಲ್ವೆಯಿಂದ ಭಾರತಕ್ಕೆ ಉತ್ತಮ ಸಂಪರ್ಕಜಾಲದ ವ್ಯವಸ್ಥೆಯಾಗಿದ್ದು, ಸಂಕ್ರಾಮಿಕ ರೋಗಗಳು ಸಹ ಕಡಿಮೆಯಾಗಿವೆ.

ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದಲ್ಲಿ ಸಾರಿಗೆ ಸಂಪರ್ಕ ವ್ಯವಸ್ಥೆಯನ್ನು ಕಲ್ಪಿಸಿಕೊಡಲು ಪ್ರಯತ್ನಿಸಿದರು. ಅವರು ಪ್ರಮುಖವಾಗಿ ಇಂಜಿನಿಯರಾಗಿದ್ದರಿಂದ ಅವರು ದೇಶದ ಅಭಿವೃದ್ಧಿಗೆ ಸಾರಿಗೆ ಸಂಪರ್ಕ ಅವಶ್ಯಕವೆಂದು ಮನಗಂಡಿದ್ದರು. ಅದಕ್ಕಾಗಿ ರಸ್ತೆಗಳ ನಿರ್ಮಾಣ, ರೈಲು ಮಾರ್ಗಗಳ ನಿರ್ಮಾಣಕ್ಕೆ ಯೋಜನೆ ಹಾಕಿ ಕಾರ್ಯಗತಗೊಳಿಸಲು ಪ್ರಯತ್ನಿಸಿದರು. ಅವರು ಗ್ರಾಮಗಳಿಗೂ ಸರಿಯಾದ ರಸ್ತೆ ವ್ಯವಸ್ಥೆ ಮಾಡಲು ಗ್ರಾಮಸ್ಥರ ಸಹಕಾರವನ್ನು ಪಡೆದುಕೊಳ್ಳುತ್ತಿದ್ದರು. ಅವರು ಸಾರಿಗೆ ಸಂಪರ್ಕ ವ್ಯವಸ್ಥೆಯ ಬಗ್ಗೆ ಮಾತನಾಡುತ್ತಾ-

"ಕಳೆದ ಅರ್ಧ ಶತಮಾನದಿಂದ ರೈಲುಗಳು ಆಂತರಿಕವಾಗಿ ಭಾರತದಲ್ಲಿ ಸರಕು ಸಾಗಣಿಕೆಯ ಏಕಸ್ವಾಮ್ಯ ಪಡೆದಿವೆ. ಮೋಟರ್ ವಾಹನಗಳು ರೈಲಿನ ಏಕಸ್ವಾಮ್ಯವನ್ನು ಪ್ರತಿಭಟಿಸಿವೆ. ಆದರೆ ಅವುಗಳ ಪ್ರಭಾವ ಅತಿಯಲ್ಲ. ರೈಲುಗಳು ಭಾರವಾಹಕಗಳಾಗಿಯೂ, ಪ್ರಯಾಣಿಕರನ್ನು ದೂರದೂರದ ಪ್ರದೇಶಗಳಿಗೆ ಸಾಗಿಸುವ ಸುಲಭ ಸಾಧನಗಳಾಗಿ ದೀರ್ಘಕಾಲ ಎಳೆಯುವುದರಲ್ಲಿ ಸಂದೇಹವಿಲ್ಲ. ಗ್ರಾಮಗಳ ಉತ್ಪಾದನೆಗಳನ್ನು ನಗರಗಳಿಗೆ ಸ್ವಲ್ಪ ಸಮಯದಲ್ಲೇ ಸಾಗಿಸುವ ಕಾರ್ಯದಲ್ಲಿ ವ್ಯಾಪಾರೋದ್ಯಮಗಳಿಗೆ ಪ್ರೋತ್ಸಾಹದಾಯಕವಾಗಿವೆ"[೨೫]

-ಎಂದಿದ್ದಾರೆ. ರೈಲು ಮಾರ್ಗಗಳಿಗೆ ಸಂಬಂಧಿಸಿದಂತೆ ವಿಶ್ವೇಶ್ವರಯ್ಯನವರು ವಿದೇಶಗಳ ಅಂಕಿ-ಅಂಶಗಳನ್ನು ಕೊಡಲಾರಂಭಿಸಿದರು. ಅವರು ತಮ್ಮ ಜನಸಂಖ್ಯೆಗೆ ಅವಶ್ಯಕವಿರುವಷ್ಟು ರೈಲು ಸಂಪರ್ಕಬೇಕು ಎನ್ನುತ್ತಿದ್ದುದುಂಟು. ಹೀಗಾಗಿ ಅವರು ೧೯೧೭ರಲ್ಲಿ ಪ್ರತ್ಯೇಕ ರೈಲ್ವೆ ಇಲಾಖೆಯನ್ನೇ ಸ್ಥಾಪಿಸಿದರು.[೨೬] ರೈಲ್ವೆ ಸಂಪರ್ಕವನ್ನು ಕಲ್ಪಿಸಿಕೊಡುವುದಕ್ಕೆ ವಿದೇಶಿ ತಜ್ಞರನ್ನು ಕರೆಸಿ ಅದರ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿದರು. ಇದರಿಂದಾಗಿ ಮೈಸೂರು ಸಂಸ್ಥಾನದಲ್ಲಿ ರೈಲು ಸಂಪರ್ಕವು ಸುವ್ಯವಸ್ಥಿತವಾಗಿ ನಡೆಯಲು ಸಾಧ್ಯವಾಯಿತು. ಇವರ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣ ಪ್ರದೇಶಗಳಿಗೂ ಸಂಪರ್ಕಕಲ್ಪಿಸುವ ವ್ಯವಸ್ಥೆ ನಡೆದಿತ್ತು. ಇವರು

ದಿವಾನರಾಗಿದ್ದ ಕಾಲದಲ್ಲಿ ಮೈಸೂರು-ಅರಸೀಕೆರೆ, ಬೆಂಗಳೂರು-ಚಿಕ್ಕಬಳ್ಳಾಪುರ-ಕೋಲಾರ, ಚಿತ್ರದುರ್ಗ-ಚಿಕ್ಕಜಾಜೂರು ಹೀಗೆ ಅನೇಕ ಪ್ರದೇಶಗಳಿಗೆ ರೈಲುಮಾರ್ಗಗಳ ನಿರ್ಮಾಣವಾಯಿತು.[೨೬] ಇದರಿಂದಾಗಿ ಮೈಸೂರು ಸಂಸ್ಥಾನಕ್ಕೆ ಹೆಚ್ಚು ಆದಾಯ ದೊರೆಯಲಾರಂಭಿಸಿತು. ಈ ರೈಲು ಮಾರ್ಗಗಳಿಂದ ಬಡ ಜನರಿಗೆ, ರೈತರಿಗೆ ವ್ಯಾಪಾರ ವಹಿವಾಟು ನಡೆಸಲು ತುಂಬ ಸಹಕಾರಿಯಾಯಿತು. ಅಲ್ಲದೆ ಈ ರೈಲ್ವೆ ಮಾರ್ಗಗಳ ನಿರ್ಮಾಣದಿಂದ ಮೈಸೂರು ಸಂಸ್ಥಾನದ ಜನರಿಗೆ ಉದ್ಯೋಗ ದೊರೆತು, ನಿರುದ್ಯೋಗವು ಸ್ವಲ್ಪ ಪ್ರಮಾಣದಲ್ಲಿ ನಿವಾರಣೆಯಾಯಿತು. ಇದು ವಿಶ್ವೇಶ್ವರಯ್ಯನವರ ಪ್ರಮುಖ ಆಶಯವೂ ಆಗಿತ್ತು.

ಗಾಂಧಿಯು ಪ್ರಮುಖವಾಗಿ ರೈಲನ್ನು ವಿರೋಧಿಸಿ ಅದು ನಮಗೆ ಅವಶ್ಯಕವಿಲ್ಲವೆನ್ನುತ್ತಿದ್ದರು. ಅವರು ರೈಲ್ವೆ ದುಷ್ಪಾರಿಣಾಮಗಳನ್ನು ಕುರಿತು-

> "ರೈಲು ಬರುವುದಕ್ಕೆ ಮುಂಚೆ ಭಾರತದ ಪ್ರತಿಯೊಂದು ಹಳ್ಳಿಗಳಲ್ಲಿಯು ದವಸದ ಕಣಜಗಳ ಹಗೇವುಗಳು ತುಂಬಿರುತ್ತಿದ್ದವು. ಈ ರೀತಿ ನಾವು ಹೆಚ್ಚು ವ್ಯವಸ್ಥಿತವಾಗಿಯೇ ಇದ್ದೇವು. ಬೆಳೆ ಕೆಟ್ಟರೆ ನಮ್ಮ ಕೈಗಾವಲಿಗೆ ನಮ್ಮ ಗೃಹೋದ್ಯೋಗಗಳು ಇದ್ದೇಇದ್ದವು. ಈಗ ರೈಲು ಬಂದು ನಮ್ಮ ಕಣಜ ಹಗೇವುಗಳೆಲ್ಲ ಬರಿದಾದವು. ನಮ್ಮ ಕೈಗಾರಿಕೆ ಸತ್ತು ಹೋದವು"[೨೭]

-ಎಂದು ಅಂದಿನ ಭಾರತದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮಾತನಾಡಿದ್ದಾರೆ. ಅಂದು ಭಾರತವು ಬಡತನ, ಹಸಿವು, ಬರಗಾಲಗಳು ಸಂಭವಿಸುತ್ತಿದ್ದವು. ಅಲ್ಲದೆ ಆಂಗ್ಲರು ಈ ರೈಲ್ವೆ ಸಂಪರ್ಕ ವ್ಯವಸ್ಥೆ ಮಾಡಿ ದೇಶದ ಸಂಪತ್ತನ್ನು ದೋಚುತ್ತಿದ್ದರು. ಇದರಿಂದ ರೈತರು ಬರಗಾಲ ಸಂಭವಿಸಿದಾಗ ಹೆಚ್ಚಿನ ತೊಂದರೆಯನ್ನು ಅನುಭವಿಸುತ್ತಿದ್ದರು. ಇದರ ಅರಿವಿದ್ದ ಗಾಂಧಿಯು ರೈಲ್ವೆ ವ್ಯವಸ್ಥೆಯನ್ನು ವಿರೋಧಿಸುತ್ತಿದ್ದುದುಂಟು.

ಈ ದಿಸೆಯಲ್ಲಿ ಗಾಂಧಿ ಅವರು ಮುಂದಾಲೋಚನೆ ಮಾಡಿಲ್ಲವೆಂದೇ ಹೇಳಬೇಕಾಗುತ್ತದೆ. ಅವರು ಅಂದಿನ ಭಾರತದ ಪರಿಸ್ಥಿತಿಗೆ ತಕ್ಕಂತೆ ಮಾತನಾಡುತ್ತಿದುದ್ದುಂಟು. ಆದರೆ ಇಂದಿನ ಪರಿಸ್ಥಿತಿಗೆ ರೈಲು ಸಂಪರ್ಕಗಳ ಸೇವೆಯು ಬಹಳ ಮಹತ್ವದ್ದು. ಈ ವ್ಯವಸ್ಥೆಯಿಂದ ಸಾಮಾನ್ಯ ಪ್ರಜೆಯು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸುಲಭ ದರದಲ್ಲಿ ಪ್ರಯಾಣಿಸಲು ಸಾಧ್ಯ. ರೈಲ್ವೆ ಇಲಾಖೆ ಕೇಂದ್ರ ಸರ್ಕಾರದ ಸ್ವಾಧೀನದಲ್ಲಿದ್ದು ಹೆಚ್ಚು ಆದಾಯ ತರುತ್ತಿದೆ.

ಜಾಗತೀಕರಣದ ಈ ಹೊತ್ತಿನಲ್ಲಿ ಗಾಂಧಿ ಅವರು ಹೇಳುವಂತೆ ಎತ್ತಿನಗಾಡಿಯನ್ನು ಬಳಸಲು ಸಾಧ್ಯವಿಲ್ಲ. ಇಂದು ರೈಲ್ವೆ ಸಂಪರ್ಕ ವ್ಯವಸ್ಥೆ ಬಹಳ ಸಹಕಾರಿ ಆಗಿದೆ. ಈ ರೈಲುಗಳಿಂದ ಕೆಲವು ತೊಂದರೆಗಳಿದ್ದರೂ ಸಹ ಅದರಿಂದ ತುಂಬ ಅನುಕೂಲವಿದೆ. ಈ ಹಿನ್ನೆಲೆಯಲ್ಲಿ ವಿಶ್ವೇಶ್ವರಯ್ಯನವರು ಹಾಕಿಕೊಟ್ಟ ಯೋಜನೆಗಳೇ ಹೆಚ್ಚು ಪ್ರಸ್ತುತ. ಹೀಗೆ ಗಾಂಧಿ ಹಾಗೂ ವಿಶ್ವೇಶ್ವರಯ್ಯ ಅವರುಗಳು ತಮ್ಮದೇ ಆದ ನೆಲೆಗಳಲ್ಲಿ ರೈಲ್ವೆಯನ್ನು ಕುರಿತು ಚಿಂತಿಸಿದ್ದಾರೆ. ಗಾಂಧಿ ರೈಲ್ವೆಯನ್ನು ವಸಾಹತುಶಾಹಿಗಳ

ಶೋಷಣೆಯ ಸಾಂಕೇತವಾಗಿ ಪರಿಗಣಿಸಿದರೆ, ವಿಶ್ವೇಶ್ವರಯ್ಯ ಅವರು ಅನುಕೂಲದ ದೃಷ್ಟಿಯಿಂದ ಪರಿಭಾವಿಸಿರುವುದು ಸ್ಪಷ್ಟ ಆಗುತ್ತದೆ.

## ೩.೬. ದೇಶದ ಪ್ರಗತಿ

ಆಂಗ್ಲರು ಭಾರತವನ್ನು ದಾಸ್ಯ ಸಂಕೋಲೆಯಲ್ಲಿಟ್ಟು ಆಳ್ವಿಕೆ ನಡೆಸುತ್ತಿದ್ದ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿ ಉಂಟಾಯಿತು. ಭಾರತವು ಆಂಗ್ಲರ ಮಾರುಕಟ್ಟೆಯಾಗಿ ಪರಿವರ್ತನೆಗೊಂಡಿತ್ತು. ಇದರಿಂದ ಭಾರತದಲ್ಲಿದ್ದ ಗ್ರಾಮೀಣ ಅಥವಾ ಗೃಹ ಕೈಗಾರಿಕೆಗಳು ನಶಿಸತೊಡಗಿದವು. ಭಾರತೀಯರು ಜೀವನ ನಡೆಸುವುದಕ್ಕೆ ತುಂಬ ದುಸ್ತರವಾಯಿತು. ಈ ಘಟ್ಟದಲ್ಲಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ಅನೇಕ ಯೋಜನೆಗಳನ್ನು ರೂಪಿಸತೊಡಗಿದ್ದರು. ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದಲ್ಲಿ ಅನೇಕ ಯೋಜನೆ ರೂಪಿಸಿ ಅದರಲ್ಲಿ ಯಶಸ್ವಿಯೂ ಆದರು. ಗಾಂಧಿ ರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಕಾರ್ಯಕ್ರಮಗಳನ್ನು ರೂಪಿಸಿ ಅವುಗಳನ್ನು ಅಳವಡಿಸಲು ಪ್ರಯತ್ನಿಸುತ್ತಿದ್ದುದನ್ನು ಪರಿಶೀಲಿಸಬಹುದು.

ವಿಶ್ವೇಶ್ವರಯ್ಯ ಅವರು ಅಂದಿನ ಕಾಲದಲ್ಲೇ ದೇಶದ ಪ್ರಗತಿಗೋಸ್ಕರ ನೂರುವರ್ಷಗಳ ಮುಂದೆ ಹೋಗಿ ಚಿಂತಿಸಿದವರು. ಅವರು ಕೈಗೊಂಡ ಯೋಜನೆಗಳು, ಕಾರ್ಯಕ್ರಮಗಳು ಅಷ್ಟು ವೇಗವಾಗಿ ಪ್ರಗತಿ ಹೊಂದಲು ಬಯಸಿದವರು. ಅವರು ಮೈಸೂರಿಗೆ ಕಾಲನ್ನು ಇಟ್ಟಿದ್ದೆ ತಡ, ಹಿಂದುಳಿದಿದ್ದ ಮೈಸೂರನ್ನು ಮುಂದುವರೆಯಲು ನೂತನ ವಾತಾವರಣವೇ ಸೃಷ್ಟಿಯಾಯಿತು. "ಕೈಗೊಂಡ ಕೆಲಸ ಸಾಧಿಸಬೇಕು, ನಡೆ ತ್ವರಿತವಾಗಿರಬೇಕು. ಈ ಆತಂಕ, ತೀಕ್ಷ್ಣತೆ ಭಾರತೀಯರಲ್ಲಿ ದುರ್ಲಭ. ಇದೇ ಭಾರತೀಯರಲ್ಲಿ ಕಂಡುಬರುವ ಮಹಾ ದೋಷ" ಎಂದು ಅಮೇರಿಕಾದ ತಜ್ಞರು ವಿಶ್ವೇಶ್ವರಯ್ಯ ಅವರಲ್ಲಿ ವ್ಯಕ್ತಪಡಿಸಿದ್ದ ಮಾತುಗಳು. ಈ ದೋಷವನ್ನು ನಿವಾರಣೆ ಮಾಡಲು ಮತ್ತು ದೇಶದ ಆರ್ಥಿಕ ಪ್ರಗತಿ ಹೊಂದಲು ೧೯೧೧ರಲ್ಲೇ ಸಂಪದಾಭಿವೃದ್ಧಿ ಸಮ್ಮೇಳನವನ್ನು ಸ್ಥಾಪಿಸಿದರು.[೨೯] ಈ ಸಮ್ಮೇಳನದ ಮುಖ್ಯ ಉದ್ದೇಶ ಕೃಷಿ, ಕೈಗಾರಿಕೆ, ಶಿಕ್ಷಣ, ವ್ಯಾಪಾರ, ವಾಣಿಜ್ಯಗಳೆಲ್ಲ ಅಭಿವೃದ್ಧಿಪಡಿಸು ವುದಾಗಿತ್ತು. ಈ ಕಾರ್ಯಗಳಿಗೆ ಮಹಾರಾಜರ ಬೆಂಬಲವಿತ್ತು. ಈ ಸಭೆಯನ್ನು ಪ್ರತಿವರ್ಷವು ನಡೆಯುವಂತೆ ಏರ್ಪಾಡು ಮಾಡಿದರು. ಈ ಸಭೆಯಲ್ಲಿ ದೇಶವು ಹೇಗೆ ಅಭಿವೃದ್ಧಿ ಹೊಂದಬೇಕು. ನಮ್ಮ ದೇಶವು ಯಾವುದರಿಂದ ಹಿಂದೆ ಉಳಿದಿದೆ ಎಂಬುದನ್ನು ಚರ್ಚಿಸಲಾಗುತ್ತಿತ್ತು. ಅಲ್ಲದೆ ಈ ಸಭೆಯಲ್ಲಿ ವಿದೇಶಗಳ ಅಭಿವೃದ್ಧಿಯ ಅಂಕಿ-ಅಂಶಗಳಿಗೆ ಹೋಲಿಕೆ ಮಾಡಿ ಅದರಂತೆ ನಾವು ಅಭಿವೃದ್ಧಿ ಹೊಂದಬೇಕಾದ ಅಗತ್ಯವಿದೆ ಎನ್ನುತ್ತಿದ್ದರು.

ವಿಶ್ವೇಶ್ವರಯ್ಯನವರು ಆರು ವರ್ಷಗಳ ಕಾಲ ದಿವಾನರಾಗಿದ್ದವರು. ಈ ಅವಧಿಯಲ್ಲಿ ನಿರ್ದಿಷ್ಟ ಗುರಿ ಸಾಧಿಸಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರು. ಅವುಗಳಲ್ಲಿ ಶಿಕ್ಷಣ, ಕೈಗಾರಿಕೆಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿತ್ತು. ಇವರು ಮೈಸೂರು ಸಂಸ್ಥಾನಕ್ಕೆ ಮಾತ್ರ ಸೀಮಿತವಾಗಿರದೆ ಇತರ ಸಂಸ್ಥಾನಗಳ ಪ್ರಗತಿಯನ್ನು ಬಯಸುತ್ತಿದ್ದರು. ಅದಕೋಸ್ಕರ ಅನೇಕ ಯೋಜನೆಗಳನ್ನು ಹಾಕಿಕೊಟ್ಟಿದ್ದರು.

ವಿಶ್ವೇಶ್ವರಯ್ಯನವರು ದಿವಾನರಾಗಿ ಅಧಿಕಾರ ವಹಿಸಿಕೊಂಡ ಅನಂತರದ ದಿನಗಳಲ್ಲಿ ಪ್ರಪಂಚದ ಪ್ರಥಮ ಮಹಾಸಂಗ್ರಾಮ ಪ್ರಾರಂಭವಾಗಿತ್ತು. ಅದು ೧೯೧೪ರಲ್ಲಿ ಆರಂಭವಾಗಿ ಅವರು ನಿವೃತ್ತಗೊಳ್ಳುವವರೆಗೆ ಅಂದರೆ ೧೯೧೮ರವರೆಗೂ ಮುಂದುವರೆದಿತ್ತು. ಇಂಥ ಸಮಯದಲ್ಲೇ ವಿಶ್ವೇಶ್ವರಯ್ಯನವರು ದೇಶದ ಅಭಿವೃದ್ಧಿಗೋಸ್ಕರ ಅನೇಕ ಯೋಜನೆಗಳನ್ನು ಹಾಕಿಕೊಂಡಿದ್ದರು. ಇದಲ್ಲದೆ ಮೈಸೂರು ಸಂಸ್ಥಾನವು ಸಹ ಆಂಗ್ಲರ ಅಧೀನದಲ್ಲಿತ್ತು. ಇದರಿಂದಾಗಿ ಆಂಗ್ಲರು ಯುದ್ಧದಲ್ಲಿ ಪಾಲ್ಗೊಂಡಿದ್ದರಿಂದ ಧನಸಹಾಯ ಮತ್ತು ಸೈನ್ಯ ಸಹಾಯವನ್ನು ಅವರಿಗೆ ಕಲ್ಪಿಸಿಕೊಡಬೇಕಾಗಿತ್ತು. ತಾವು ಹಾಕಿಕೊಂಡಿದ್ದ ಯೋಜನೆಗಳಿಗೂ ಅವರ ಅನುಮತಿಯನ್ನು ಪಡೆಯಬೇಕಾಗಿತ್ತು. ಅಲ್ಲದೆ ಆಂಗ್ಲರು ತಮ್ಮ ಅಧೀನದಲ್ಲಿರುವ ಸಂಸ್ಥಾನವನ್ನು ಮುಂದುವರಿಯಲು ಬಯಸುತ್ತಿರಲಿಲ್ಲ. ಆದರೂ ಸಹ ವಿಶ್ವೇಶ್ವರಯ್ಯನವರು ತಮ್ಮ ದೃಢನಿಲುವು, ವಿಶ್ವಾಸ. ದಕ್ಷತೆ ಮತ್ತು ಸಾಮರ್ಥ್ಯಗಳಿಂದ ಅನುಮತಿ ಪಡೆದು ದೇಶವನ್ನು ಪ್ರಗತಿಯ ಕಡೆಗೆ ಕೊಂಡೊಯ್ಯಲು ಪ್ರಯತ್ನಿಸಿದರು.

ವಿಶ್ವೇಶ್ವರಯ್ಯ ಅವರ ಇಷ್ಟು ಉತ್ಸಾಹ, ಆತುರತೆ, ಪ್ರಗತಿಯ ವೇಗವನ್ನು ಗಮನಿಸಿದ ಸಹಕಾರ ಇಲಾಖೆಯ ರಿಜಿಸ್ಟ್ರಾರ್ ಆಗಿದ್ದ ಕೆ.ಎಚ್.ರಾಮಯ್ಯ ಅವರು-

> "ವಿಶ್ವೇಶ್ವರಯ್ಯನವರ ಅತಿವೇಗದಿಂದ ಓಡುವ ಎಂಜಿನ್ ಇದನ್ನು ಮೂಲಗಾಡಿಗೆ ಜೋಡಿಸಿ ಎಳೆಯಲು ಬಿಟ್ಟಾಗ ಎಂಜಿನ್ ಭುಗ್, ಭುಗ್ ಎಂದು ಎಳೆಯುತ್ತದೆ. ಗಾಡಿಗೆ ಶಕ್ತಿಯಿಲ್ಲ. ಮುಂದೆ ಹೋಗಲು ಬಾರದು ಬಯಸದು. ಆದರೆ ಎಂಜಿನ್ ಬಿಡದು ಹೀಗೆ ಸೆಣಸಾಟ ನಡೆಯುತ್ತಲೇ ಇರುತ್ತದೆ"[೨೦]

-ಎಂದಿದ್ದಾರೆ. ಇದರಿಂದ ವಿಶ್ವೇಶ್ವರಯ್ಯನವರ ಆಲೋಚನೆ, ಕಾರ್ಯವೈಖರಿ ಮತ್ತು ಪ್ರಗತಿಯ ದೃಷ್ಟಿಕೋನ ಎಷ್ಟು ವಿಶಿಷ್ಟತೆಯಿಂದ ಕೂಡಿತ್ತು ಎಂಬುದು ತಿಳಿಯುತ್ತದೆ.

ಗಾಂಧಿ ಅವರು ಸಹ ಅಂದಿನ ಭಾರತದ ಪರಿಸ್ಥಿತಿಗೆ ತಕ್ಕಂತೆ ಚಿಂತಿಸಿದವರು. ಅವರು ಭಾರತವು ಹಳ್ಳಿಗಳಿಂದ ಕೂಡಿದ ದೇಶವಾಗಿದ್ದು ಅದರ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಬೇಕು. ಹಳ್ಳಿಗಳ ಉದ್ಧಾರವಾದರೆ ದೇಶ ಉದ್ಧಾರವಾಗುತ್ತದೆ ಎನ್ನುತ್ತಾ ತಮ್ಮ ಯೋಜನೆಗಳನ್ನು, ಚಿಂತನೆಗಳನ್ನು ಹಳ್ಳಿಗಳಿಗೆ ಪ್ರಾಧಾನ್ಯತೆ ಕಲ್ಪಿಸಿಕೊಟ್ಟಿದ್ದರು. ಗಾಂಧಿ ಅವರ ದೇಶದ ಆರ್ಥಿಕಾಭಿವೃದ್ಧಿಗೆ ರಾಟೆಯೇ

ಪ್ರಮುಖ ಅಸ್ತ್ರ. ರಾಟೆಯನ್ನು ೧೯೦೮ರಲ್ಲಿ ಕಂಡುಕೊಂಡಿದ್ದರು. ಇದನ್ನು ಭಾರತಾದ್ಯಂತ ಅಳವಡಿಸಿದರೆ ಉತ್ತಮ ಎಂದು ಚಿಂತಿಸಿ, ೧೯೧೯ರಲ್ಲಿ ಪೂರ್ಣ ಪ್ರಮಾಣದಲ್ಲಿ ಜಾರಿಗೆ ತರಲು ಪ್ರಯತ್ನ ಶೀಲರಾದರು.[೨೦] ಇದಕ್ಕಾಗಿ ಭಾರತೀಯ ಕಾಂಗ್ರೇಸ್‌ಪತಿಯಿಂದ ಭಾರತದಾದ್ಯಂತ ರಾಟೆ ಮತ್ತು ಖಾದಿ ಪ್ರಚಾರಕ್ಕಾಗಿ ಆದ್ಯತೆ ನೀಡಲಾಯಿತು. ಅಂದು ಭಾರತವು ಹೊಂದಿದ ಜನಸಂಖ್ಯೆಗನುಗುಣವಾಗಿ ಪ್ರಗತಿ ಸಾಧಿಸಲು ರಾಟೇ ಮತ್ತು ಖಾದಿಯಿಂದಲೇ ಸಾಧ್ಯ ಎಂಬುದು ಅವರ ವಾದ.

ಆಂಗ್ಲರ ಕೈಗಾರಿಕಾ ಕ್ರಾಂತಿಯಿಂದಾಗಿ ಭಾರತದ ಗುಡಿಕೈಗಾರಿಕೆಗಳು ನಶಿಸತೊಡಗಿದ್ದವು. ಬಡತನ, ನಿರುದ್ಯೋಗ, ಹಸಿವು ಇವುಗಳಿಂದ ಜನ ಬಳಲುತ್ತಿದ್ದರು. ಇದರ ಜೊತೆಗೆ ಭಾರತೀಯ ಕೃಷಿ ಕಾರ್ಮಿಕರು ವ್ಯವಸಾಯ ಮಾಡಲು ಮಳೆಯನ್ನೇ ಆಶ್ರಯಿಸಿದ್ದರು. ಹೀಗಾಗಿ ಕೃಷಿ ಕಾರ್ಮಿಕರು ಆರು ತಿಂಗಳು ಕಾಲ ದುಡಿದು ಉಳಿದ ಆರು ತಿಂಗಳು ಉದ್ಯೋಗವಿಲ್ಲದೆ ನಿರುದ್ಯೋಗಿಗಳಾಗಿರುತ್ತಿದ್ದರು. ಇದನ್ನು ಬಗೆಹರಿಸಲು ಆಲೋಚಿಸಿದ ಗಾಂಧಿ ರೈತರು ಹತ್ತಿ ಎಕ್ಕುವುದು, ನೂಲುವುದನ್ನು ಕಲಿತುಕೊಂಡರೆ ಉದ್ಯೋಗ ದೊರೆಯುತ್ತದೆ. ಅಲ್ಲದೆ ನಾವು ನಮ್ಮ ದೇಶದ ಬಟ್ಟೆಗಳನ್ನು ತೊಟ್ಟುಕೊಳ್ಳಬಹುದು. ಇದರಿಂದ ವಿದೇಶಗಳಿಗೆ ಹೋಗುವ ಹಣವು ನಮ್ಮಲ್ಲಿಯೇ ಉಳಿಯುತ್ತದೆ. ಉಳಿದ ಹಣವು ರಾಷ್ಟ್ರೀಯ ವರಮಾನವಾಗಿ ರಾಷ್ಟ್ರಕ್ಕೆ ಸೇರುತ್ತದೆ ಎಂದು ಚಿಂತಿಸಿದರು. ಗಾಂಧಿಯು ಆಂಗ್ಲರಿಂದ ನಾಶವಾಗುತ್ತಿದ್ದ ಚರ್ಮಹದ ಮಾಡುವ, ಆಲೆಮನೆ, ಮಡಿಕೆ ತಯಾರಿಕೆ ಮೊದಲಾದ ಗೃಹ ಕೈಗಾರಿಕೆಗಳನ್ನು ಪುನರುದ್ಧಾರ ಮಾಡಲು ಪ್ರಯತ್ನಿಸಿದರು.

ವಿಶ್ವೇಶ್ವರಯ್ಯ ಅವರು ಕೃಷಿಯ ಅಭಿವೃದ್ಧಿಗೆ ಆಧುನಿಕತೆಯನ್ನು ಅಳವಡಿಸಲು ಚಿಂತಿಸಿದರು. ಅವರು ಕೃಷಿಯಲ್ಲಿ ಹೊಂದಿದ ಹಳೆಯ ಸಂಪ್ರದಾಯಿಕ ಪದ್ಧತಿಯನ್ನು ತೊಲಗಿಸಲು ಯತ್ನಸಿದ್ದು ಮಹತ್ವದ್ದು. ಮಳೆಯ ಹೊರತಾಗಿ ನೀರಾವರಿಗೆ ಹೆಚ್ಚಿನ ಆದ್ಯತೆ ನೀಡಲು ಮುಂದಾದರು.

ಗಾಂಧಿ ಆಧುನಿಕತೆಯಿಂದ ದೂರ ಉಳಿದ್ದವರು. ಆದರಿಂದ ನಮಗೆ ಅಪಾಯವೆಂದು ಮನಗಂಡಿದ್ದರು. ಅವರು ರಾಟೆಯನ್ನು ಸಂಪುರ್ಣವಾಗಿ ಅಳವಡಿಸಿಕೊಂಡರೆ ನಿರುದ್ಯೋಗ ನಿವಾರಣೆಯಾಗುತ್ತದೆ. ಜನರು ನೆಮ್ಮದಿಯಿಂದ ಜೀವನ ನಡೆಸಬಹುದು ಎಂದು ಯಂತ್ರವನ್ನು ವಿರೋಧಿಸುತ್ತಿದ್ದರು. ಯಂತ್ರವು ಮಾನವನ ಹಿಡಿತದಲ್ಲಿರಬೇಕೇ ಹೊರತು, ಮನುಷ್ಯ ಯಂತ್ರದ ಹಿಡಿತದಲ್ಲಿರಬಾರದು. ಈ ಯಂತ್ರದಿಂದ ವಸ್ತುಗಳನ್ನು ಉತ್ಪಾದನೆ ಮಾಡದೆ ನಿರುದ್ಯೋಗ ಸೃಷ್ಟಿಯಾಗುತ್ತದೆ. ಆದರೆ ಎಷ್ಟು ಜನರಿಂದ ಉತ್ಪಾದನೆಯಾಗುತ್ತದೋ ಅಷ್ಟು ಜನರಿಂದ ಕೂಡಿ ಯಂತ್ರದ ಸಹಾಯದಿಂದ ಉತ್ಪಾದನೆ ಮಾಡಿದರೆ, ಎಲ್ಲರಿಗೂ ಉದ್ಯೋಗ ದೊರೆಯುತ್ತದೆ. ಅಂತಹ ಯಂತ್ರವನ್ನು ವಿರೋಧಿಸುವುದಿಲ್ಲ ಎನ್ನುತ್ತಿದುದ್ದುಂಟು. ಹತ್ತು ಜನರಿಂದ ಉತ್ಪಾದನೆ ಮಾಡುವ ವಸ್ತುಗಳನ್ನು ಒಂದು ಯಂತ್ರದ

ಸಹಾಯದಿಂದ ಉತ್ಪಾದನೆ ಮಾಡಿದ ಒಂಬತ್ತು ಜನರು ನಿರುದ್ಯೋಗಿಗಳಾಗಿರುತ್ತಾರೆ. ಅದ್ದರಿಂದ ಈ ಯಂತ್ರ ಬೇಡ ನಮ್ಮ ಆರ್ಥಿಕಾಭಿವೃದ್ಧಿಗೆ ರಾಟೆಯೇ ಯಂತ್ರ. ಇದರಿಂದ ಎಲ್ಲರಿಗೂ ಉದ್ಯೋಗ ದೊರೆಯುತ್ತದೆ ಎಂದು ಗಾಂಧಿ ಆಲೋಚಿಸುತ್ತಿದ್ದರು.[೩೨]

ಗಾಂಧಿ ಅವರು ಗಿರಣಿಗಳಿಂದ ಬಡತನ ಹೆಚ್ಚಾಗುತ್ತದೆ. ಯಾಕೆಂದರೆ ಅದರಿಂದ ನಿರುದ್ಯೋಗ ಸೃಷ್ಟಿ ಕಾರಣ. ಅಲ್ಲದೆ ದೇಶದ ಸಂಪತ್ತು ಕೂಡ ಒಬ್ಬರಲೇ ಶೇಖರವಾಗುತ್ತದೆ ಎಂದು ಎಚ್ಚರಿಸುತ್ತಿದ್ದುದುಂಟು. ಗಿರಣಿಗಳ ಬಗ್ಗೆ ಮಾತನಾಡುತ್ತಾ-

> "ಬೊಂಬಾಯಿ ಗಿರಣಿಯ ಕೆಲಸಗಾರರು ಗುಲಾಮರಾಗಿದ್ದಾರೆ. ಗಿರಣಿಗಳು ಕೆಲಸ ಮಾಡುವ ಹೆಂಗಸರ ಪರಿಸ್ಥಿತಿ ನೋಡಿದರೆ ಮನಕುದಿಯುತ್ತದೆ. ಈ ಗಿರಣಿಗಳಿಲ್ಲದಿದ್ದಾಗ ಈ ಹೆಂಗಸರು ಉಪವಾಸ ಮಾಡುತ್ತಿರಲಿಲ್ಲ. ಈ ಯಂತ್ರದ ಭ್ರಾಂತಿ ಹೆಚ್ಚಾದಂತೆ ನಮ್ಮ ದೇಶ ಬಹಳ ದುಃಖಕ್ಕೆ ಗುರಿಯಾಗುತ್ತದೆ"[೩೩]

-ಎಂದು ಹೇಳಿದ್ದಾರೆ.

ಭಾರತದಲ್ಲಿ ಗಿರಣಿಗಳು ಬರುವುದಕ್ಕಿಂತ ಮೊದಲು ಮನೆಯಲ್ಲೆ ಹೆಂಗಸರು ಸಂತೋಷದಿಂದ ಇದ್ದರು. ಅಲ್ಲದೆ ಅವರು ತಮಗೆ ಅವಶ್ಯಕತೆ ಇರುವ ವಸ್ತುಗಳನ್ನು ಮನಯಲ್ಲೆ ತಯಾರಿಸುತ್ತಿದ್ದುದುಂಟು. ಅವರಿಗೆ ಯಾವುದರಿಂದಲೂ ಬಂಧನವಿರಲಿಲ್ಲ. ಆದರೆ ಕಾರ್ಖಾನೆಯ ಸ್ಥಾಪನೆಯಾದ ನಂತರ ಮತ್ತು ಮಾನವನ ಬಯಕೆಗಳು ಹೆಚ್ಚಾದಂತೆ ಗುಲಾಮರಾಗತೊಡಗಿದರು. ಅವರು ಜೀವನ ನಡೆಸುವದಕ್ಕೆ ಗಿರಣಿಗಳಲ್ಲಿ ಸೇರಿಕೊಳ್ಳುತ್ತಿದ್ದರು. ಇದರಿಂದಾಗಿ ಗಾಂಧಿ ಚಿಂತನೆಯು ಪ್ರಮುಖವಾಗಿ ಗಿರಣಿಗಳಿಗೆ ಗುಲಾಮರಾಗಬೇಡಿ ಎನ್ನುವುದಾಗಿತ್ತು.

ಗಾಂಧಿ ಅವರ ಆಲೋಚನೆಯು ಪ್ರಮುಖವಾಗಿ ಮಾನವನನ್ನು ಬಂಧನದಿಂದ ಮುಕ್ತಗೊಳಿಸುವುದಾಗಿತ್ತು. ಮನುಷ್ಯನು ನೆಮ್ಮದಿಯಿಂದ ಬಾಳಬೇಕಾದರೆ ಈ ಯಂತ್ರದ ಭ್ರಾಂತಿಯನ್ನು ಬಿಡಬೇಕು. ಬದಲಾಗಿ ರಾಟೆಯನ್ನು ಜನರು ಬಳಸುವುದರಿಂದ ಸ್ವತಂತ್ರ್ಯರಾಗಿರಬಹುದು. ಆದರೆ ಇಂದಿಗೂ ಸಹ ಈ ಯಂತ್ರ ಭ್ರಾಂತಿಯಿಂದ ಜನರು ಜೀವನವನ್ನು ನಡೆಸುತ್ತಿದ್ದಾರೆ. ಅವರು ಮೇಲ್ನೋಟಕ್ಕೆ ಚೆನ್ನಾಗಿ ಕಂಡರೂ ಸಹ ಒಳಗಡೆ ತಮ್ಮ ನೋವನ್ನು ಅನುಭವಿಸುತ್ತಿರುವುದುಂಟು. ಅದಕೋಸ್ಕರ ರೈತರ ಬಗ್ಗೆ ತಮ್ಮ ಕಾಳಜಿಯನ್ನು ವ್ಯಕ್ತಪಡಿಸುತ್ತಿದ್ದ ಗಾಂಧಿ ಅವರ ಆಲೋಚನೆಗಳು ಮಹತ್ವದವು. ಗಾಂಧಿ ರೈತರ ಬಗ್ಗೆ ಮಾತನಾಡುತ್ತಾ-

> "ರೈತರು ಬದುಕಬೇಕಾದರೆ ಪರದೇಶಿ ವಸ್ತುಗಳನ್ನು ಬಹಿಷ್ಕಾರ ಮಾಡುವುದು ಒಳ್ಳೆಯದು. ರೈತರು ಸೊಗಸಾಗಿ ಕಾಣುವ ಅಗ್ಗದ ವಿದೇಶಿ ವಸ್ತುಗಳನ್ನು ಕೊಳ್ಳದ, ರೈತರು ತಮ್ಮ ಬಿಡುವಿನ ವೇಳೆಯಲ್ಲಿ ಹತ್ತಿ ಹೆಕ್ಕುವುದು, ನೂಲುವುದು ಇವುಗಳಿಗೆ ವಿನಿಯೋಗಿಸಿದರೆ ಆ ನೂಲಿನಿಂದ ಹಳ್ಳಿಯ ನೌಕರನ ಸಹಾಯದಿಂದ ಬಟ್ಟೆಯನ್ನು ನೇಯಿಸಬಹುದು"[೩೪]

-ಎಂದಿದ್ದಾರೆ. ಅಂದು ಪ್ರಮುಖವಾಗಿ ವಿದೇಶಿ ಕಾರ್ಖಾನೆಯಿಂದ ತಯಾರಾಗುತ್ತಿದ್ದ ಬಟ್ಟೆಗಳು ಅಗ್ಗವಾಗಿ ದೊರೆಯುತ್ತಿದ್ದವು. ಇದರಿಂದ ಭಾರತದಾದ್ಯಂತ ಚಳವಳಿಯನ್ನು ಹಮ್ಮಿಕೊಂಡು ವಿದೇಶಿ ವಸ್ತುಗಳನ್ನು ಬಹಿಷ್ಕಾರ ಹಾಕಿದರು. ಅಲ್ಲದೆ ಭಾರತದ ಕೈಮಗ್ಗದ ಗಿರಣಿಗಳು ನಾಶವಾಗುವ ಸ್ಥಿತಿಗೆ ತಲುಪಿದ್ದವು. ಆದ್ದರಿಂದಲೇ ಕೈಮಗ್ಗದ ಗಿರಣಿಗಳಿಗೆ ಹೆಚ್ಚಿನ ಆದ್ಯತೆ ಕೊಡುವುದಕ್ಕೋಸ್ಕರ ಗಾಂಧಿ ಅವರು ರೈತರು ಸ್ವದೇಶಿ ಬಟ್ಟೆಗಳನ್ನೇ ಧರಿಸುವಂತೆ ಕೇಳಿಕೊಂಡರು. ಅಲ್ಲದೆ ರೈತರು ನೂಲುವುದನ್ನು ಕಲಿತುಕೊಂಡರೆ, ನೌಕರನಿಗೆ ಸಹಾಯವಾಗುವುದರ ಜೊತೆಗೆ ಸ್ವದೇಶಿ ಬಟ್ಟೆಗಳನ್ನು ಧರಿಸಬಹುದು ಎಂಬ ನಿಲುವು ಅವರದು.

ಆದರೆ ವಿಶ್ವೇಶ್ವರಯ್ಯನವರ ದೇಶದ ಪ್ರಗತಿಯ ಆಲೋಚನೆಗಳು ಭಿನ್ನ. ಭಾರತೀಯರಲ್ಲಿನ ಜಡತ್ವ, ಸೋಮಾರಿತನಗಳನ್ನು ತೊಲಗಿಸಬೇಕು ಎಂಬಂಥದ್ದು. ಇದು ರಾಷ್ಟ್ರದ ಪ್ರಗತಿಗೆ ಅಡ್ಡಿಯುಂಟಾಗುತ್ತದೆ. ಪ್ರತಿಯೊಬ್ಬರು ಕಷ್ಟಪಟ್ಟು ದುಡಿದರೆ ಆದಾಯವನ್ನು ಗಳಿಸಬಹುದು. ಇದು ದೇಶದ ಅಭಿವೃದ್ಧಿಗೂ ಸಹಾಯವಾಗುತ್ತದೆ. ಇದಕ್ಕಾಗಿ ಕೈಗಾರಿಕೆಯಲ್ಲಿ ಕೆಲಸ ಮಾಡಿದರೆ ಸಾಧ್ಯವಾಗುತ್ತದೆ ಎಂಬುದಾಗಿತ್ತು. ವಿಶ್ವೇಶ್ವರಯ್ಯನವರ ಆಲೋಚನೆಯಲ್ಲಿ ದೇಶದ ಅಭಿವೃದ್ಧಿಗೋಸ್ಕರ ಸಾಲವನ್ನು ಮಾಡುವುದಕ್ಕೂ ಹಿಂಜರಿಯಬಾರದು ಎಂಬುದು. ಅಂದು ಸಾಲದ ಪ್ರಮಾಣವು ಕೈಗಾರಿಕೆಯನ್ನು ಸ್ಥಾಪಿಸುವಷ್ಟು ಇರಲಿಲ್ಲ. ಇದಕ್ಕಾಗಿ ಒಂದು ಬ್ಯಾಂಕನ್ನೇ ಸ್ಥಾಪಿಸಲು ಯೋಜನೆಯನ್ನು ಹಾಕಿದರು. ಈ ಬ್ಯಾಂಕ್ ಸ್ಥಾಪನೆಗೆ ಸಲಹೆ ಪಡೆಯಲು ಅಂದು ಪ್ರಮುಖ ಕೈಗಾರಿಕೋದ್ಯಮಿ ಸರ್ ವಿಠ್ಠಲದಾಸ್ ಥ್ಯಾಕರೆಯ ಸಹಾಯ ಪಡೆದುಕೊಂಡರು. ಹೀಗಾಗಿ ೧೯೧೩ರಲ್ಲೇ ಮೈಸೂರು ಸಂಸ್ಥಾನವು ಬ್ಯಾಂಕನ್ನು ಸ್ಥಾಪಿಸಿತ್ತು.[೬೦] ಇದರಿಂದ ಕೈಗಾರಿಕೆಯನ್ನು ಸ್ಥಾಪಿಸಲು ಖಾಸಗಿಯವರಿಗೆ ಸಾಲ ನೀಡುವ ವ್ಯವಸ್ಥೆ ಮಾಡಿದರು. ಅಲ್ಲದೆ ಸರ್ಕಾರದ ವತಿಯಿಂದ ಕೈಗಾರಿಕೆ ಸ್ಥಾಪಿಸಲು ಪ್ರಯತ್ನಿಸಿದರು.

ಗಾಂಧಿಯು ಗೃಹಕೈಗಾರಿಕೆಗಳಿಗೆ ಆದ್ಯತೆ ಕಲ್ಪಿಸಿಕೊಟ್ಟರು. ಅದರಂತೆ ರಾಟೆಗೆ ಪ್ರಥಮ ಸ್ಥಾನವಿತ್ತು. ಇದಲ್ಲದೆ ಉಳಿದ ಗುಡಿಕೈಗಾರಿಕೆಗಳಿಂದಾದ ಮಡಿಕೆ ತಯಾರಿಕೆ, ಚರ್ಮ ಹದಮಾಡುವುದು, ಮರಗೆಲಸ ನೂಲುವುದು, ನೇಯುವುದು ಇವು ಭಾರತಕ್ಕೆ ಸಾಕು. ಇದರಿಂದ ಭಾರತೀಯರು ನೆಮ್ಮದಿಯಿಂದ ಪೈಪೋಟಿ ಇಲ್ಲದೆ ಸುಖಮಯವಾಗಿರಬಹುದು ಎಂದು ಆಲೋಚಿಸಿದರು. ಅವರು-

"ಗ್ರಾಮ ಉದ್ಯೋಗಗಳು ನಾಶವಾದರೆ ಭಾರತದ ಏಳು ಲಕ್ಷ ಹಳ್ಳಿಗಳು ನಾಶವಾಗುತ್ತದೆ"[೬೧]

-ಎಂದು ಎಚ್ಚರಿಸಿದ್ದರು. ಹೀಗಾಗಿ ಅವರು ತಮ್ಮಲ್ಲಿರುವ ಕೈಕಸುಬುಗಳೇ ಸಾಕು ಎನ್ನುತ್ತಿದ್ದರು. ಇದರಿಂದ ದೇಶವು ಸ್ವಾಲಂಬಿಯಾದರೆ ಅಭಿವೃದ್ಧಿಯಾಗುತ್ತದೆ ಎಂಬ ನಿಲುವನ್ನು ವ್ಯಕ್ತಪಡಿಸಿದ್ದರು.

ಗಾಂಧಿ ಖಾದಿಯ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರಿದ್ದಲ್ಲದೆ ಅದರಿಂದ ದೇಶದ ಪ್ರಗತಿ ಸಾಧ್ಯವೆನ್ನುತ್ತಿದ್ದರು. ಅವರು ಖಾದಿಯ ಬಗ್ಗೆ-

> "ಖಾದಿಯಾದರೋ ಗ್ರಾಮದ ಗ್ರಹಮಂಡಲದ ಸೂರ್ಯ ಉಳಿದ ವಿವಿಧ ಉದ್ಯೋಗಗಳು ತಾವು ಖಾದಿಯಿಂದ ಪಡೆದ ಸತ್ವಗಳಿಗೆ ಪ್ರತಿಯಾಗಿ ಆದಕ್ಕೆ ಬೆಂಬಲ ನೀಡುವ ಉಪಗ್ರಹಗಳು. ಖಾದಿಯಿಲ್ಲದೆ ಇತರ ಉದ್ಯೋಗಗಳು ಬೆಳೆಯಲಾರವು. ಆದರೆ ಇತರ ಉದ್ಯೋಗಗಳನ್ನು ಪುನರುಜ್ಜೀವನಗೊಳಿಸಿದ ಖಾದಿಯು ಹೆಚ್ಚು ಪ್ರಗತಿ ಸಾಧಿಸಲಾರದೆಂದು ನನ್ನ ಈತ್ತೀಚಿನ ಸಂಚಾರದಲ್ಲಿ ಕಂಡುಕೊಂಡೆ"[೩೭]

-ಎಂದಿದ್ದಾರೆ. ಅವರು ಖಾದಿಯಲ್ಲಿಟ್ಟಿದ್ದ ನಂಬಿಕೆ, ಪ್ರೇಮ ಮತ್ತು ಭರವಸೆ ತುಂಬ ಇತ್ತು. ಇದರ ಜೊತೆಗೆ ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದಂತೆ ಎಲ್ಲ ಉದ್ಯೋಗಗಳಿಗೂ ಪ್ರೋತ್ಸಾಹ ನೀಡ ತೊಡಗಿದರು. ಇದರಿಂದ ದೇಶದ ಪ್ರಗತಿ ಸಾಧಿಸಲು ಸಾಧ್ಯವೆನ್ನುತ್ತಿದ್ದರು.

ಆದರೆ ವಿಶ್ವೇಶ್ವರಯ್ಯನವರು ದೇಶದ ಪ್ರಗತಿ ಕೈಗಾರಿಕೆಯಿಂದಲೇ ಸಾಧ್ಯವೆಂದು ಚಿಂತಿಸಿದರು. ಇದರಿಂದ ಹೆಚ್ಚು ಉತ್ಪಾದನೆ ಮಾಡಬಹುದು. ಹೆಚ್ಚು ಆದಾಯಗಳಿಸಬಹುದು. ಅಲ್ಲದೆ ದೇಶದ ಸಂಪತ್ತನ್ನು ಕೈಗಾರಿಕೆಯಿಂದ ಸಮರ್ಪಕವಾಗಿ ಬಳಸಿಕೊಳ್ಳಬಹುದು. ಇದರಿಂದ ಜನರು ನೆಮ್ಮದಿಯಿಂದ ಜೀವನ ನಡೆಸಲು ಸಾಧ್ಯ. ಕೈಗಾರಿಕೆಯ ಸ್ಥಾಪನೆಯಿಂದ ದೇಶದ ಅಭಿವೃದ್ಧಿಯ ಜೊತೆಗೆ ನಿರುದ್ಯೋಗದ ಸಮಸ್ಯೆ ನಿವಾರಣೆಯಾಗುತ್ತದೆ ಎಂದು ಆಲೋಚಿಸಿದರು. ಹೀಗಾಗಿ ಅವರು ೧೯೧೬ರ ದಸರಾ ಅಧಿವೇಶನದಲ್ಲಿ ಮಾತನಾಡುತ್ತಾ-

> "ಆರ್ಥಿಕ ಚಟುವಟಿಕೆಗಳನ್ನು ಸಮರೂಪದಲ್ಲಿ ಹಾಗೂ ಹೆಚ್ಚು ವ್ಯವಸ್ಥಿತವಾಗಿ ಸಂಘಟಿಸಲು ಒಂದು ಯೋಜನೆಯನ್ನು ತಯಾರಿಸಲಾಗಿದೆ. ಈ ಯೋಜನೆಯ ಮೇರೆಗೆ ಇಡೀ ರಾಜ್ಯ ನೂರು ಕ್ಷೇತ್ರಗಳಾಗಿ ವಿಂಗಡಿಸಲಾಗುತ್ತದೆ. ಅದರಲ್ಲಿ ಅನೇಕ ತಾಲೂಕುಗಳು, ಮೈಸೂರು ಮತ್ತು ಬೆಂಗಳೂರು ನಗರಗಳು ಹಾಗೂ ಕೆಲವು ಮುಖ್ಯ ಪಟ್ಟಣಗಳು ಸೇರಿವೆ. ತಾಲೂಕು ಕ್ಷೇತ್ರಗಳು ಬಿಡಿ ಬಿಡಿ ಕೆಲಸವನ್ನು ನಡೆಸಲು ಸ್ಥಳಗಳನ್ನು ಮತ್ತು ವ್ಯಕ್ತಿಗಳನ್ನು ಆರಿಸುವ ಅಗತ್ಯವಿದೆ. ಈ ರೀತಿ ಅರವತ್ತೆರಡು ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಏರ್ಪಾಡುಗಳನ್ನು ಪೂರ್ತಿಗೊಳಿಸಲಾಗಿದೆ. ಈ ಯೋಜನೆಯ ಕಾರ್ಯಾಚರಣೆಯ ವ್ಯಾಪ್ತಿಯಲ್ಲಿ ಉಳಿದ ಕ್ಷೇತ್ರಗಳನ್ನು ಶೀಘ್ರವಾಗಿ ತರಲು ಯೋಚಿಸಲಾಗಿದೆ"[೩೮]

-ಎಂದು ಯೋಜನೆಯನ್ನು ಹಾಕಿ ಅದನ್ನು ಕಾರ್ಯಗತಗೊಳಿಸಿದರು. ಪ್ರತಿಯೊಂದು ನಗರ ಮತ್ತು ಪಟ್ಟಣಗಳನ್ನು ಅಭಿವೃದ್ಧಿಪಡಿಸುವುದು ಅದರ ಉದ್ದೇಶವಾಗಿತ್ತು. ಅವರು ಆಧುನಿಕ ರೀತಿಯಲ್ಲಿ ಯೋಜನೆಯನ್ನು ಹಾಕಿದ್ದು ಇಂದಿಗೂ ಪ್ರಸ್ತುತ. ಅವರ ಸಮಗ್ರ ಚಿಂತನೆಯು ದೇಶದ ಪ್ರಗತಿಯ ಮೈಲಿಗಲ್ಲಾಗಿತ್ತು.

ವಿಶ್ವೇಶ್ವರಯ್ಯನವರು ದೇಶದ ಪ್ರಗತಿಗೋಸ್ಕರ ಚಿಂತಿಸಿ ಮೈಕಾನಿಕಲ್ ಎಂಜನಿಯರಿಂಗ್ ಕಾಲೇಜನ್ನು ೧೯೧೭ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಿದರು. ಅದೇ ವರ್ಷ ಮಲೆನಾಡನ್ನು ಅಭಿವೃದ್ಧಿಪಡಿಸಲು ಸಮಿತಿಯನ್ನು ನೇಮಿಸಲಾಯಿತು. ವ್ಯಾಪರವನ್ನು ಉತ್ತಮ ಬೆಲೆ ಮತ್ತು ಖರೀದಿಗೆ ಸಂಬಂಧಿಸಿದಂತೆ ೧೯೧೬ರಲ್ಲಿ ಮೈಸೂರಿನಲ್ಲಿ ವಾಣಿಜ್ಯ ಸಂಘವನ್ನು ಸ್ಥಾಪಿಸಲಾಯಿತು. ಇದರಿಂದ ರೈತರಿಗೆ ಮತ್ತು ವ್ಯಾಪರಸ್ಥರಿಗೆ ಸರ್ಕಾರದಿಂದ ಬೆಂಬಲ ಬೆಲೆ ದೊರಕಲು ಅನುಕೂಲವಾಗಿತ್ತು. ಇವರು ಮಹಿಳೆಯರನ್ನು

ಸಂಘಟಿಸಿ ಅವರ ಅಭಿವೃದ್ಧಿಗೆ ಗಮನಹರಿಸಿದರು. ಇದಕ್ಕಾಗಿ ಮಹಿಳಾ ಸಮಾಜ ಅಥವಾ ಲೇಡಿಸ್ ಕ್ಲಬ್‌ಗಳ ಸ್ಥಾಪನೆಗೆ ಚಾಲನೆ ನೀಡಿದರು.

ವಿಶ್ವೇಶ್ವರಯ್ಯನವರ ಆಲೋಚನೆಯು ಪ್ರಮುಖವಾಗಿ ಕೈಗಾರಿಕೆಯಿಂದಲೇ ದೇಶದ ಪ್ರಗತಿ ಸಾಧ್ಯವೆನ್ನುವಂಥದ್ದಾಗಿತ್ತು. ಅಲ್ಲದೆ ಸ್ವಾಭಿಮಾನಿಯಾದ ಇವರು ವಿದೇಶಗಳಿಂದ ಆಮದು ಮಾಡಿಕೊಳ್ಳಲು ವಿರೋಧಿಸುತ್ತಿದ್ದುದುಂಟು. ಇವರ ಗ್ರಾಮೋದ್ಯೋಗಗಳಿಗೂ ಆದ್ಯತೆ ನೀಡದರೂ ಸಹ ಗ್ರಾಮಗಳಿಗೂ ಕೈಗಾರಿಕೆ ಅವಶ್ಯಕವೆಂದರು. ವ್ಯವಸಾಯಕ್ಕೆ ಬೇಕಾಗುವ ನೇಗಿಲು, ಗುಳ, ಪಿಕಾಸಿ, ಗುದ್ದಲಿ, ಕೊಡಲಿ ಇನ್ನು ಮುಂತಾದವುಗಳನ್ನು ತಯಾರು ಮಾಡಲು ಕೈಗಾರಿಕೆ ಮುಖ್ಯವಾಗಿತ್ತು. ಅದನ್ನು ಕಾರ್ಯಗತಗೊಳಿಸಲು ಆದ್ಯತೆ ನೀಡಲಾಯಿತು.

ವಿಶ್ವೇಶ್ವರಯ್ಯನವರು ಗುಡಿಕೈಗಾರಿಕೆಗಳಿಗೂ ಆದ್ಯತೆ ನೀಡಿದ್ದರು. ಅಲ್ಲದೆ ಕೈಸಬುಗಳಿಗೂ ಹೆಚ್ಚಿನ ಪ್ರೋತ್ಸಾಹ ನೀಡಲಾಗಿತ್ತು. ಸೊರಬದ ಗುಡಿಗಾರರು ತಯಾರಿಸುವ ಕಲಾಕೃತಿಗಳಿಗೆ, ಚನ್ನಪಟ್ಟಣದ ಅರಿಗಿನ ಆಟಿಕೆಗಳಿಗೆ, ನಂಜನಗೂಡಿನ ಚಾಪೆ, ದೊಡ್ಡಬಳ್ಳಾಪುರದಲ್ಲಿ ತಯಾರಾಗುವ ಜಮಖಾನೆಗಳು ಮೈಸೂರು ಸಂಸ್ಥಾನದಲ್ಲಿ ಜನಪ್ರಿಯವಾಗಿದ್ದವು. ಆದರೆ ಇವುಗಳಿಗೆ ನಿಗದಿಯಾದ ಬೆಲೆ ಸಿಗದೆ ಗುಡಿಕಾರರು ಜೀವನ ನಡೆಸಲು ದುಸ್ತರವಾಗಿತ್ತು. ಇದನ್ನು ಆಲೋಚಿಸಿದ ವಿಶ್ವೇಶ್ವರಯ್ಯನವರು ಮೈಸೂರು ಆರ್ಟ್ಸ್ ಮತ್ತು ಕ್ರಾಫ್ಟ್ ಡಿಪೋವನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಇದರಿಂದ ಗುಡಿಕೈಗಾರಿಕೆಗಳಿಗೆ ಪ್ರೋತ್ಸಾಹ ಸಿಕ್ಕಿದಂತಾಯಿತು.

ಮೈಸೂರು ಸಂಸ್ಥಾನದಲ್ಲಿ ಏನು ದೊರೆಯುತ್ತದೆ ಎಂಬುದನ್ನು ಸಂಶೋಧನೆ ಕೈಗೊಳ್ಳಲು ಕಾರ್ಯಕ್ರಮ ರೂಪಿಸಿದರು. ಅಂದು ಕಾಡುಗಳಲ್ಲಿ ದೊರೆಯುತ್ತಿದ್ದ ಗಂಧದ ಮರಗಳನ್ನು ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಅಲ್ಲದೆ ವಿದೇಶಗಳಿಂದ ತಯಾರಾದ ಗಂಧದ ಎಣ್ಣೆಯನ್ನು ಆಮದು ಮಾಡಿಕೊಳ್ಳುತ್ತಿದ್ದರು. ಗಂಧದ ಎಣ್ಣೆ ಸಾಬೂನುಗಳಿಗೆ ಮತ್ತು ಗಂಧದ ಕಡ್ಡಿಗೆ ತುಂಬ ಅವಶ್ಯಕವಿತ್ತು. ಇದರ ಬಗ್ಗೆ ಆಲೋಚಿಸಿದ ವಿಶ್ವೇಶ್ವರಯ್ಯನವರು ದೇಶದ ಸಂಪತ್ತು ವಿದೇಶಗಳಿಗೆ ಹೋಗುವ ಬದಲು ಇಲ್ಲಿರುವಂತೆ ಚಿಂತಿಸತೊಡಗಿದರು. ಗಂಧದ ಎಣ್ಣೆ ತಯಾರಿಸಲು ಟಾಟಾ ಕಂಪನಿ ವಿಜ್ಞಾನಿಗಳಿಗೆ ಸಂಶೋಧನೆ ಕೈಗೊಳ್ಳುವಂತೆ ವ್ಯವಸ್ಥೆ ಮಾಡಿದರು. ಸಂಶೋಧನೆಯ ನಂತರ ಮೈಸೂರಿನಲ್ಲಿ ೧೯೧೬ರಂದು ಸರ್ಕಾರದ ವತಿಯಿಂದ ಗಂಧದ ಎಣ್ಣೆ ತಯಾರಿಸಲು ಕಾರ್ಖಾನೆಯನ್ನು ಸ್ಥಾಪಿಸಲಾಯಿತು.[೬೮] ಇದರ ಉಪಯೋಗ ಪಡೆಯಲು ಸಾಬೂನು ಕಾರ್ಖಾನೆಯು ಅಸ್ತಿತ್ವಗೊಂಡಿತು. ಇದರಿಂದ ದೇಶದ ಸಂಪತ್ತು ವೃದ್ಧಿಯಾಗುವುದರ ಜೊತೆಗೆ ಜನರಿಗೆ ಉದ್ಯೋಗ ದೊರೆಯುವಂತಾಯಿತು.

ಅರಣ್ಯದಲ್ಲಿ ದೊರೆಯುತ್ತಿದ್ದ ಮೃದು ಮರಗಳನ್ನು ಮತ್ತು ಬೊಂಬುಗಳನ್ನು ಪತ್ತೆಮಾಡಲಾಯಿತು. ಇವುಗಳಿಂದ ಕಾಗದ ತಯಾರಿಸಲು ಇಂಡಿಯಾ ಸರ್ಕಾರದ ತಜ್ಞರ ನೆರವು ಪಡೆದುಕೊಂಡರು. ಹೀಗಾಗಿ

ಕಾಗದವನ್ನು ತಯಾರಿಸಲು ಭದ್ರಾವತಿಯಲ್ಲಿ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಮೃದು ಮರಗಳಿಂದ ಬೆಂಕಿಕಡ್ಡಿ ಮತ್ತು ಪೊಟ್ಟಣ ತಯಾರಿಸಲು ಶಿವಮೊಗ್ಗದಲ್ಲಿ ವಿದೇಶಿಯರ ನೆರವು ಪಡೆದು ಕಾರ್ಖಾನೆ ಸ್ಥಾಪಿಸಿದರು. ಇದಲ್ಲದೆ ಬೆಂಗಳೂರಿನಲ್ಲಿ ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಷಾಪ್ ಅಸ್ತಿತ್ವಕ್ಕೆ ಬಂದಿತು. ಇದನ್ನು ಪ್ರತಿಯೊಂದು ಜಿಲ್ಲಾ ಕೇಂದ್ರಗಳಿಗೂ ಒಂದೊಂದು ಸ್ಥಾಪಿಸಲು ಹಣವನ್ನು ಮಂಜೂರು ಮಾಡಿದರು. ಹೀಗಾಗಿ ಮೈಸೂರು ಸಂಸ್ಥಾನವು ಪ್ರತಿಯೊಂದು ಕ್ಷೇತ್ರಗಳ ಅಭಿವೃದ್ಧಿಗೂ ಕೈಗಾರಿಕೆಯಿಂದಲೇ ಸಾಧ್ಯವೆನ್ನುವಂತಾಯಿತು.

ವಿಶ್ವೇಶ್ವರಯ್ಯನವರು ಜಲಪಾತಗಳನ್ನು ನೋಡಿ ಅವು ಎಷ್ಟು ವ್ಯರ್ಥವಾಗಿ ಹೋಗುತ್ತಿದೆ ಎಂದು ವ್ಯಥೆಪಟ್ಟುಕೊಂಡು ಆಲೋಚಿಸಿದರು. ಅದನ್ನು ಸಮರ್ಪಕವಾಗಿ ಬಳಸಿಕೊಳ್ಳಲು ವಿದ್ಯುತ್ ಉತ್ಪಾದನೆಯೇ ಸರಿ ಎಂದು ಚಿಂತಿಸಿದರು. ಹೀಗಾಗಿ ಶಿವನಸಮುದ್ರದಲ್ಲಿ ಜಲವಿದ್ಯುತ್ ಇನ್ನು ಹೆಚ್ಚು ಉತ್ಪಾದನೆಯಾಯಿತು. ಇದರಿಂದಾಗಿ ಗಿರಣಿಗಳೂ ವಿದ್ಯುತ್ ಸೌಲಭ್ಯ ಪಡೆದುಕೊಂಡು ಹೆಚ್ಚು ಉತ್ಪಾದನೆ ಮಾಡತೊಡಗಿದವು. ಅಲ್ಲದೆ ಆಲೆಮನೆ, ಕೈಮಗ್ಗ ಅಥವಾ ಬಟ್ಟೆ ಗಿರಣಿ, ಭತ್ತದ ಗಿರಣಿ, ಎಣ್ಣೆಗಿರಣಿ, ಚರ್ಮವನ್ನು ಹದ ಮಾಡುವುದಕ್ಕೂ ವಿದ್ಯುತ್ ಸೌಲಭ್ಯ ದೊರೆಯಿತು. ಈ ವಿದ್ಯುತ್‌ನನ್ನು ಬಳಸಿ ನೀರೆತ್ತುವ ಪಂಪ್ ಸಾಧನಗಳನ್ನು ಬಳಸಿಕೊಳ್ಳಲು ಸಾಧ್ಯವಾಯಿತು. ಇದರಿಂದಾಗಿ ವ್ಯವಸಾಯವು ಮತ್ತಷ್ಟು ಅಭಿವೃದ್ಧಿಗೊಂಡಿತು. ಯಂತ್ರಗಳಿಗೆ ವಿದ್ಯುತ್ ಸೌಲಭ್ಯ ದೊರೆತಿದ್ದರಿಂದ ಕೈಮಗ್ಗಗಳಿಗೆ ನಿರುದ್ಯೋಗ ಉಂಟಾಯಿತು. ಇದನ್ನು ಚಿಂತಿಸಿದ ವಿಶ್ವೇಶ್ವರಯ್ಯನವರು ಅವರಿಗೆ ಸರ್ಕಾರದಿಂದ ಧನ ಸಹಾಯವನ್ನು ಕಲ್ಪಿಸಿಕೊಟ್ಟರು. ಪಾತ್ರೆಗಳನ್ನು ತಯಾರಿಸುವುದಕ್ಕೂ ನಾಗಮಂಗಲ ದಲ್ಲಿ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಇದರಿಂದಾಗಿ ಜನರು ಆಧುನಿಕ ರೀತಿಯ ಜೀವನ ನಡೆಸಲು ಸಾಧ್ಯವಾಗಿತ್ತು. ಈ ರೀತಿಯಾಗಿ ಅವರು ಕೈಗೊಂಡ ಕಾರ್ಯಗಳು, ಚಿಂತನೆಗಳು ಮೈಸೂರು ಸಂಸ್ಥಾನವನ್ನು ಭಾರತದಲ್ಲೇ 'ಮಾದರಿ ಸಂಸ್ಥಾನ' ಎಂದು ಹೆಸರು ಪಡೆಯಲು ಕಾರಣವಾದವು.

ಒಟ್ಟಿನಲ್ಲಿ ಗಾಂಧಿ ಅವರು ಮಾನವೀಯತೆಗೆ ಹೆಚ್ಚಿನ ಆದ್ಯತೆ ಕೊಟ್ಟಿದ್ದರು. ಅಲ್ಲದೆ ಅವರ ತತ್ವವು ಮಾನವನ ಬಯಕೆಗಳು ಮಿತವಾಗಿರಬೇಕೆಂಬುದು. 'ಹಾಸಿಗೆ ಇದ್ದಷ್ಟು ಕಾಲು ಚಾಚು' ಎಂಬ ತತ್ವಕ್ಕೆ ಅನ್ವಯವಾಗಿರುತ್ತದೆ ಅವರ ಚಿಂತನೆ. ಈ ನಿಲುವನ್ನು ಇಂದು ಪಾಲಿಸುವುದಕ್ಕೆ ಯಾರು ಇಷ್ಟಪಡುವುದಿಲ್ಲ. ಇಂದು ದೇಶದ ಅಭಿವೃದ್ಧಿಗೆ ವಿಶ್ವೇಶ್ವರಯ್ಯನವರ ಯೋಜನೆ ಅವಶ್ಯಕವಿದ್ದರು ಸಹ ಗಾಂಧಿ ಅವರ ಗೃಹಕೈಗಾರಿಕೆಯ ಚಿಂತನೆಯೂ ಮುಖ್ಯವಾಗುತ್ತದೆ.

### ೩.೭. ಆರೋಗ್ಯ

ಗಾಂಧಿ ಮತ್ತು ವಿಶ್ವೇಶ್ವರಯ್ಯನವರು ದೇಶದ ಜನರ ಆರೋಗ್ಯವನ್ನು ಕುರಿತು ಆಲೋಚಿಸುತ್ತಿದುದ್ದುಂಟು. ಅಂದು ಭಾರತದಲ್ಲಿ ಸಾಂಕ್ರಾಮಿಕ ರೋಗಗಳು ಹೆಚ್ಚು ಹರಡುತ್ತಿದ್ದವು.

ಇದರಿಂದಾಗಿ ಜನರು ಸಾಯುವ ಪರಿಸ್ಥಿತಿಯು ನಿರ್ಮಾಣವಾಗಿತ್ತು. ಅಲ್ಲದೆ ಅವರು ಚಿಂತಿಸಿದ ಕಾಲದಲ್ಲಿ ಸರಿಯಾದ ವೈದ್ಯಕೀಯ ಸೌಲಭ್ಯವಿರಲಿಲ್ಲ. ಹೀಗಾಗಿ ಸಾಮಾನ್ಯವಾಗಿ ಆಯುರ್ವೇದ ಮತ್ತು ಯುನಾನಿ ಔಷಧಗಳನ್ನು ಮಾತ್ರ ಬಳಸುತ್ತಿದುದ್ದುಂಟು. ಇಂಗ್ಲಿಷ್ ಔಷಧ ಕಡಿಮೆ ಪ್ರಮಾಣದಲ್ಲಿದ್ದರೂ ಸಹ ಜನರು ಆ ಸೌಲಭ್ಯವನ್ನು ಪಡೆದುಕೊಳ್ಳಲು ಭಯಪಡುತ್ತಿದ್ದರು.

ಇಂದು ಭಾರತವು ಆರೋಗ್ಯ ಸುಧಾರಣೆಗಾಗಿ ದೊಡ್ಡ ಯೋಜನೆಗಳನ್ನು ಹಾಕಿಕೊಂಡಿದೆ. ಇದರಿಂದಾಗಿ ಸಂಕ್ರಾಮಿಕ ರೋಗಗಳು ಕಡಿಮೆಯಾಗಿವೆ. ಅಲ್ಲದೆ ಜನರು ಪ್ರಸ್ತುತ ಪರಿಸ್ಥಿತಿಯಲ್ಲಿ ಆಯುರ್ವೇದಿಕ್ ಮತ್ತು ಇಂಗ್ಲಿಷ್ ಔಷಧಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುತ್ತಿದ್ದಾರೆ. ಹೀಗಾಗಿ ಜನರ ಆರೋಗ್ಯ ಪರಿಸ್ಥಿತಿಯು ಉತ್ತಮ ಮಟ್ಟದಲ್ಲಿದೆ.ಅಲ್ಲದೆ ಸರ್ಕಾರವು ಪೋಲಿಯೋ. ಪಥಾರ ಚುಚ್ಚುಮದ್ದು ಇನ್ನಿತರ ಕಾರ್ಯಕ್ರಮಗಳನ್ನು ಹಾಕಿಕೊಂಡು ಜನರಲ್ಲಿ ಆರೋಗ್ಯದ ಬಗ್ಗೆ ಜಾಗೃತಿಯನ್ನುಂಟು ಮಾಡುತ್ತಿದೆ. ಈ ಹಿನ್ನೆಲೆಯಲ್ಲಿ ಅವರು ಚಿಂತಿಸಿದ ಆಲೋಚನೆಗಳು ಇಂದಿಗೂ ಕೆಲವೊಂದು ವಿಷಯಗಳಲ್ಲಿ ಪ್ರಸ್ತುತವಾಗುತ್ತಿವೆ.

ಗಾಂಧಿ ಅವರು ಜನರ ಆರೋಗ್ಯದ ಬಗ್ಗೆ ಚಿಂತಿಸಿ ಕೆಲವೊಂದು ಸಲಹೆಗಳನ್ನು ಸೂಚಿಸಿದರು. ಜನರು ಮಿತವಾದ ಆಹಾರವನ್ನು ಸೇವಿಸಬೇಕು. ಚೆನ್ನಾಗಿದೆಯೆಂದು ಹೊಟ್ಟೆ ತುಂಬ ತಿಂದರೆ ರೋಗಗಳು ಬರುತ್ತವೆ. ಆದ್ದರಿಂದ ರೋಗಿಗಳು ನೀರು ಮತ್ತು ಮಣ್ಣಿನ ಚಿಕಿತ್ಸೆಯನ್ನು ಮನೆಯಲ್ಲೆ ತಯಾರು ಮಾಡಿಕೊಂಡು ಉಪಯೋಗಿಸಬೇಕು. ಸಣ್ಣಪುಟ್ಟ ರೋಗಗಳಿಗೂ ವೈದ್ಯರ ಬಳಿ ಹೋಗದೆ ಪ್ರಕೃತಿಯ ಚಿಕಿತ್ಸೆಯನ್ನು ಪಡೆಯಬಹುದು. ಈ ಪ್ರಕೃತಿಯ ಚಿಕಿತ್ಸೆಯಿಂದ ಸಾವಿರದಲ್ಲಿ ಒಂಬೈನೂರ ತೊಂಬತ್ತೊಂಬತ್ತು ರೋಗಗಳನ್ನು ಗುಣಪಡಿಸುವ ಶಕ್ತಿಯಿದೆ ಎಂದು ನಂಬಿದ್ದರು. ಅವರು ಹೆಚ್ಚಾಗಿ ಪ್ರಕೃತಿಯ ಚಿಕಿತ್ಸೆಗೆ ಆದ್ಯತೆಯನ್ನು ನೀಡಿದರು. ಅವರು ಆಸ್ಪತ್ರೆಗಳನ್ನು ವಿರೋಧಿಸುತ್ತಿದ್ದರು. ಅವರೇ ಹೇಳಿದಂತೆ-

> "ಆಸ್ಪತ್ರೆಗಳು ಪಾಪದ ತವರು. ಅದರಿಂದ ಜನರು ತಮ್ಮ ಶರೀರದ ಬಗ್ಗೆ ಅಶ್ರದ್ಧೆ ತೋರುತ್ತಾರೆ. ಅನೀತಿ ಹೆಚ್ಚುತ್ತದೆ. ಇಂಗ್ಲಿಷ್ ವೈದ್ಯರಂತೂ ಎಲ್ಲರಿಗಿಂತ ಕೀಳು. ಮನುಷ್ಯನ ಶರೀರದ ರಕ್ಷಣೆಯ ಭ್ರಾಂತಿಗಾಗಿ ಪ್ರತಿವರ್ಷವು ಸಾವಿರಾರು ಪ್ರಾಣಿಗಳನ್ನು ಕೊಲ್ಲುತ್ತಾರೆ. ಜೀವಂತ ಪ್ರಾಣಿಗಳ ಮೇಲೆ ನಾನಾ ಪ್ರಯೋಗ ನಡೆಸುತ್ತಾರೆ"[೪೦]

-ಎಂದು ಇಂಗ್ಲಿಷ್ ವೈದ್ಯರನ್ನು ಮೂದಲಿಸುತ್ತಿದ್ದುಂಟು. ಅವರು ಅಂದು ಆಲೋಚಿಸಿದ್ದುದು ಪ್ರಾಣಿಗಳ ಕೊಬ್ಬುಗಳಿಂದ ಔಷಧವನ್ನು ತಯಾರು ಮಾಡುತ್ತಾರೆ. ಇದರಿಂದಾಗಿ ಪ್ರಾಣಿಗಳಿಂದ ತಯಾರಾದ ಔಷಧಗಳನ್ನು ಹಿಂದೂ ಮುಸ್ಲಿಂರು ಬಳಸಿಕೊಳ್ಳಲು ವಿರೋಧಿಸುತ್ತಾರೆ. ಪ್ರಕೃತಿಯ ಚಿಕಿತ್ಸೆಯೇ ಉತ್ತಮ ಎಂದು ಚಿಂತಿಸಿದರು. ಅಲ್ಲದೆ ಔಷಧಗಳನ್ನು ತಯಾರಿಸಲು ಪ್ರಾಣಿಗಳ ಮೇಲೆ ಪ್ರಯೋಗ ನಡೆಸಿದ ಮನುಷ್ಯರ ಮೇಲೆ ನಡೆಸಲು ಸಾಧ್ಯವಿಲ್ಲ. ಈ ಇಂಗ್ಲಿಷ್ ಔಷಧಗಳನ್ನು ಪ್ರಸ್ತುತ

ಎಲ್ಲಾ ಜನಾಂಗದವರು ಬಳಸಿಕೊಂಡು ಆರೋಗ್ಯದಿಂದ್ದಾರೆ. ಅವರ ಆಲೋಚನೆಯು ಕೇವಲ ಅಹಿಂಸೆಯ ದೃಷ್ಟಿಯನ್ನಿಟ್ಟುಕೊಂಡು ವಿರೋಧಿಸುತ್ತಿದ್ದುದು. ಆದರೆ ಇಂದು ಆಸ್ಪತ್ರೆಗಳು ಆರೋಗ್ಯವನ್ನು ಸುಧಾರಿಸಲು ಜನರಿಗೆ ಎಲ್ಲ ಸೌಲಭ್ಯಗಳನ್ನು ಕಲ್ಪಿಸಿಕೊಡುತ್ತಿವೆ.

ಗಾಂಧಿ ಅವರು ವಿದೇಶಿಗಳಿಗೆ ಹೋಗಿ ವೈದ್ಯಕೀಯ ಸೌಲಭ್ಯವನ್ನು ಪಡೆದವರಿಗೆ ಕೆಲವೊಂದು ಸಲಹೆಗಳನ್ನು ಕೊಟ್ಟರು. ಅವರು-

> "ವೈದ್ಯನಾಗಿ ಬಂದವರು ಹಳ್ಳಿಗಳಿಗೆ ಗಮನವನ್ನು ಹರಿಸಬೇಕು. ಅದು ಪಶ್ಚಿಮದ ಮಾದರಿಯಲ್ಲ. ಪೂರ್ವದೇಶಗಳ ರೀತಿಯಲ್ಲಿ ಗ್ರಾಮ ಸೇವೆಗೆ ಎಲ್ಲಾ ವೈದ್ಯರೂ ಹೆಂಗಸರಾಗಲಿ, ಗಂಡಸರಾಗಲಿ ಇಲ್ಲಿ ಬೇಕಾಗಿರುವುದನ್ನು ಮನಗಾಣುತ್ತಾರೆ. ಆಗ ಅವರು ಇಲ್ಲಿನ ಅನೇಕ ದೇಶೀಯಪದ್ಧತಿಗಳಿಗೆ ಹೊಂದಿಕೊಳ್ಳುತ್ತಾರೆ. ಪಶ್ಚಿಮ ದೇಶಗಳಿಂದ ಆಮದು ಮಾಡಿಕೊಂಡ ಔಷಧಗಳು ಭಾರತಕ್ಕೆ ಬೇಕಿಲ್ಲ. ಅದರ ಹಳ್ಳಿಗಳಲ್ಲೇ ಬಗೆಬಗೆಯಾದ ಗಿಡಮೂಲಿಕೆಗಳು ಯಥೇಚ್ಛವಾಗಿ ಸಿಕ್ಕುತ್ತವೆ. ಔಷಧಿಗಳಿಗಿಂತ ಹೆಚ್ಚಾಗಿ ಯೋಗ್ಯ ರೀತಿಯಲ್ಲಿ ಬದುಕುವುದು ಹೇಗೆ ಎಂಬುವುದನ್ನು ಅವರು ಜನರಿಗೆ ಹೇಳಿಕೊಡಬೇಕು"[೪೧]

-ಎಂದು ವಿವರಸಿದ್ದಾರೆ.

ಗಾಂಧಿ ಅವರು ದೇಶೀಯ ನೆಲೆಯಿಂದ ಚಿಂತಿಸಿ ವೈದ್ಯರಾದವರು ಹಳ್ಳಿಗಳಲ್ಲಿ ಸೇವೆ ಮಾಡಬೇಕು ಎಂದರು. ಇದು ತುಂಬ ಪ್ರಸ್ತುತವಾಗಿದೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ವೈದ್ಯರು ಹಳ್ಳಿಗಳಲ್ಲಿ ಸೇವೆ ಮಾಡದೇ ಹೆಚ್ಚಾಗಿ ನಗರ ಪ್ರದೇಶಗಳಲ್ಲೇ ಕ್ಲಿನಿಕ್‌ಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಅವರ ಪ್ರಮುಖ ಧ್ಯೇಯ ಹಣವನ್ನು ಗಳಿಸುವುದಾಗಿದೆ. ಆದರೆ ಗಾಂಧಿ ಅವರು ಆಲೋಚಿಸಿದಂತೆ ಪ್ರತಿಯೊಂದು ರೋಗವನ್ನು ಪ್ರಕೃತಿಯ ಚಿಕಿತ್ಸೆಯಿಂದ ಗುಣಪಡಿಸಲು ಸಾಧ್ಯವಿಲ್ಲ. ಕೆಲವೊಂದು ಔಷಧಗಳನ್ನು ವಿದೇಶಗಳಿಂದ ತರಿಸಿಕೊಂಡು ರೋಗವನ್ನು ಗಣಪಡಿಸುವುದು ಮುಖ್ಯ. ಪ್ರಾಣಿಗಳಿಗಿಂತ ಮನುಷ್ಯರು ಬದುಕುವುದು ಇಂದು ಮುಖ್ಯವಾಗಿದೆ. ಅವರ ಚಿಂತನೆಯು ಪ್ರಾಣಿಗಳನ್ನು ಬಲಿಕೊಡಬಾರದೆಂಬುದು. ಆದರೆ ಇಂದಿನ ಈ ಸ್ವಾರ್ಥ ಪ್ರಪಂಚದಲ್ಲಿ ಅವರ ತತ್ವಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾಗಿಲ್ಲ ಎಂದೇ ಹೇಳಬಹುದು.

ವಿಶ್ವೇಶ್ವರಯ್ಯನವರು ನಾಟಿ ಔಷದಿಗಳಿಗಿಂತ ಆಧುನಿಕ ಔಷಧಿಗಳಲ್ಲಿ ಹೆಚ್ಚು ವಿಶ್ವಾಸವುಳ್ಳವರು. ಅವರು ಆಲೋಚಿಸಿದುದು ಆಧುನಿಕ ಔಷಧಗಳನ್ನು ಬಳಸಿಕೊಂಡು ಸಂಕ್ರಾಮಿಕ ರೋಗಗಳನ್ನು ತಡೆಗಟ್ಟುವುದಾಗಿತ್ತು. ಹೀಗಾಗಿ ಅವರು ಒಂದು ವ್ಯವಸ್ಥಿತ ರೂಪದಲ್ಲಿ ವೈದ್ಯಕೀಯ ಸೌಲಭ್ಯವನ್ನು ಕಲ್ಪಿಸಿಕೊಡಬೇಕು ಎಂದು ಚಿಂತಿಸಿದರು. ಇದಕ್ಕಾಗಿ ೧೯೧೩ರ ಜನವರಿ ೩೦ರಂದು ಬೆಂಗಳೂರಿನಲ್ಲಿ ಮಿಂಟೋ ಕಣ್ಣಾಸ್ಪತ್ರೆಯನ್ನು ಪ್ರಾರಂಭಿಸಿದರು.[೪೨] ಇದರಿಂದಾಗಿ ಜನರಿಗೆ ಅನುಕೂಲವನ್ನು ಸರ್ಕಾರದ ವತಿಯಿಂದ ನೀಡಲಾಯಿತು. ಅಲ್ಲದೆ ಇವರು ಜನರ ರೋಗಗಳನ್ನು ತಡೆಗಟ್ಟುವುದಕ್ಕಾಗಿ ಶಸ್ತ್ರಚಿಕಿತ್ಸೆಯ ಸೌಲಭ್ಯವನ್ನು ಕಲ್ಪಿಸಿಕೊಡಲು ಗಮನಹರಿಸಿದ್ದರು. ವಿಶ್ವೇಶ್ವರಯ್ಯನವರು ಸಂಸ್ಥಾನದಲ್ಲಿ ವೈದ್ಯಕೀಯ

ಶಿಕ್ಷಣ ಸೌಲಭ್ಯ ಪಡೆಯುವುದಕ್ಕೆ ಆದ್ಯತೆ ನೀಡಿದ್ದರು. ಅದಕೋಸ್ಕರ ವಿದ್ಯಾರ್ಥಿಗಳಿಗೆ ವೇತನವನ್ನು ಕಲ್ಪಿಸಿಕೊಟ್ಟರು. ಅಲ್ಲದೆ ಆರೋಗ್ಯವನ್ನು ಸುಧಾರಿಸುವುದಕ್ಕೆ ೧೯೧೮ರಲ್ಲಿ ಕಾಯಿದೆಯನ್ನು ತಿದ್ದುಪಡಿ ಮಾಡಿ ವೈದ್ಯರಿಗೆ ಹೆಚ್ಚಿನ ವೇತನ ಸೌಲಭ್ಯ ಒದಗಿಸಲಾಯಿತು. ಇದರಿಂದ ವೈದ್ಯರು ರೋಗಿಗಳಿಗೆ ಉಚಿತ ರೀತಿಯಲ್ಲಿ ಚಿಕಿತ್ಸೆ ನೀಡಲು ಸಾಧ್ಯವಾಯಿತು.

ವಿಶ್ವೇಶ್ವರಯ್ಯನವರು ಆಸ್ಪತ್ರೆಗಳ ಬಗ್ಗೆ ಆಲೋಚಿಸಿ ಅವುಗಳಿಗೆ ಹೆಚ್ಚಿನ ಸೌಲಭ್ಯ ನೀಡಿದರು. ಹೀಗಾಗಿ ರೋಗಿಗಳಿಗೆ ಹಾಸಿಗೆ, ಔಷಧಿಗಳು ದೊರೆಯುವಂತಾಯಿತು. ಅಲ್ಲದೆ ರೋಗಿಗಳಿಗೆ ಶಸ್ತ್ರ ಚಿಕಿತ್ಸೆಯ ಸೌಲಭ್ಯ, ಚುಚ್ಚುಮದ್ದುಗಳನ್ನು ವಿತರಿಸಿದರು. ಇದರಿಂದಾಗಿ ಅಂದು ಹರಡಿಕೊಳ್ಳುತ್ತಿದ್ದ ಸಿಡುಬು, ಕಾಲರ, ಪ್ಲೇಗ್‌ಗಳಂಥ ಸಂಕ್ರಾಮಿಕ ರೋಗಗಳು ಹರಡಲಿಲ್ಲ. ಇದರಿಂದ ಮರಣದ ಪ್ರಮಾಣವು ಕಡಿಮೆಯಾಗಿ ಸಂಸ್ಥಾನದ ಜನರಲ್ಲಿ ಆರೋಗ್ಯವು ವೃದ್ಧಿಸಿತು. ಅವರು ಹಾಕಿಕೊಟ್ಟ ಆಧುನಿಕ ಶಸ್ತ್ರ ಚಿಕಿತ್ಸೆಯ ಸೌಲಭ್ಯವು ಇಂದಿಗೂ ಅನುಕರಣೀಯ.

**ಟಿಪ್ಪಣಿಗಳು**


೧. ನಾರಾಯಣರಾವ್ ವಿ.ಎಸ್., (೧೯೭೮), **ಮೋಕ್ಷಗುಂಡಂ ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ,** ಪು.೯೭

೨. **ಮೈಸೂರ್ ಗೆಜೆಟಿಯರ್,** Vol.IV, ಪು.೨೨೦

೩. ಅದೇ ಪು.೨೨೧

೪. ನರಸಿಂಹಸ್ವಾಮಿ ಕೆ.ಎಸ್.(ಅನು), (೧೯೯೧), **ನನ್ನ ಕನಸಿನ ಭಾರತ,** ಪು.೯೯-೧೦೦

೫. ಶೂದ್ರ ಶ್ರೀನಿವಾಸ್, (೧೯೯೦), **ಶೂದ್ರ ಗಾಂಧಿತತ್ವ ಚಿಂತನೆ ಮತ್ತು ವಿಕೇಂದ್ರೀಕರಣ,** ಪು.೭೦

೬. ನರಸಿಂಹಸ್ವಾಮಿ ಕೆ.ಎಸ್.,(೧೯೬೧), ಅದೇ, ಪು.೧೦೨

೭. ಅದೇ, ಪು.೧೦೦

೮. ನಾರಾಯಣಸ್ವಾಮಿ ವಿ.ಎಸ್.,(೧೯೭೮), ಅದೇ, ಪು.೯೭

೯. ಅದೇ, ಪು.೯೭

೧೦. ಜಯಪ್ಪಗೌಡ ಡಿ.ಎಸ್., (೧೯೯೪), **ದಿವಾನ್ ಸರ್ ಎಂ.ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು,** ಪು.೧೫೪

೧೧. ಪಾದ್ರಿ ಶಾಮಣ್ಣ(ಸಂ), (೧೯೬೯), **ಅರ್ಥವಿಚಾರ,** ಪು.೧೮೭

೧೨. ಗೊರೂರು ರಾಮಸ್ವಾಮಿ ಅಯ್ಯಂಗಾರ್(ಅನು), (೧೯೯೫), **ಮೋಹನ್ ದಾಸ ಕರಮಚಂದ ಗಾಂಧಿ ಆತ್ಮಕತೆ ಅಥವಾ ನನ್ನ ಸತ್ಯಾನ್ವೇಷಣೆ,** ಪು.೩೫೪

೧೩. ಸಿದ್ದವನಹಳ್ಳಿ ಕೃಷ್ಣಶರ್ಮ(ಸಂ), (೧೯೭೧), **ಹಿಂದ್ ಸ್ವಾರಾಜ್ಯ**, ಪು.೧೦೦

೧೪. ಸುಂದರರಾವ್ ಬ.ನ. ಮತ್ತು ವೆಂಕಟಶಾಸ್ತ್ರೀ ಬಿ., (೧೯೮೨), **ಸರ್ ಎಂ. ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ**, ಪು.೯೭

೧೫. ಜಯಪ್ಪಗೌಡ ಡಿ.ಎಸ್., (೧೯೯೪), ಅದೇ, ಪು.೯೩

೧೬. ನರಸಿಂಹಸ್ವಾಮಿ ಕೆ.ಎಸ್., (೧೯೬೧), ಅದೇ, ಪು.೨೦೦

೧೭. ಅದೇ, ಪು.೨೦೧

೧೮. **ಮೈಸೂರು ಗೆಜೆಟಿಯರ್**, Vol.IV, ಪು.೫೩೩

೧೯. ಜಯಪ್ಪಗೌಡ ಡಿ.ಎಸ್., (೧೯೯೪), ಅದೇ, ಪು.೧೦೫

೨೦. **ಮೈಸೂರು ಗೆಜೆಟಿಯರ್**, Vol.IV, ಪು.೫೧೯

೨೧. ಅದೇ, ಪು.೫೨೫

೨೨. ಅದೇ, ಪು.೪೭೧

೨೩. ನರಸಿಂಹಸ್ವಾಮಿ ಕೆ.ಎಸ್., (೧೯೬೧), ಅದೇ, ಪು.೨೪೯

೨೪. ಸಿದ್ದವನಹಳ್ಳಿ ಕೃಷ್ಣಶರ್ಮ(ಸಂ), (೧೯೭೧), ಅದೇ, ಪು.೩೯

೨೫. ನಾರಾಯಣರಾವ್ ವಿ.ಎಸ್., (೧೯೭೮), ಅದೇ, ಪು.೧೫೦

೨೬. **ಮೈಸೂರು ಗೆಜೆಟಿಯಿರ್**, Vol.IV, ಪು.೩೭೦

೨೭. ನಾರಾಯಣರಾವ್ ವಿ.ಎಸ್., (೧೯೭೮), **ಸರ್. ಎಂ.ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ**, ಪು.೧೫೨

೨೮. ಯಾಮುನಾಚಾರ್ಯ ಎಂ.(ಸಂ), (೧೯೬೨), **ಭಾಷಣಗಳು ಮತ್ತು ಹೇಳಿಕೆಗಳು**, ಪು.೧೭೯

೨೯. ನಾರಾಯಣಸ್ವಾಮಿ ವಿ.ಎಸ್., (೧೯೭೮), ಅದೇ, ಪು.೧೫೭

೩೦. ಅದೇ, ಪು.೧೫೮

೩೧. ಖಾದ್ರಿಶಾಮಣ್ಣ(ಸಂ), (೧೯೬೯), **ಅರ್ಥವಿಚಾರ**, ಪು.೮೦

೩೨. ಸಿದ್ಧವನಹಳ್ಳಿ ಕೃಷ್ಣಶರ್ಮ, (೧೯೭೧), ಅದೇ, ಪು.೪

೩೩. ಅದೇ, ಪು.೧೦೪

೩೪. ಯಾಮುನಾಚಾರ್ಯ ಎಂ.(ಸಂ), (೧೯೬೨), ಅದೇ, ಪು.೨೧೧

೩೫. ಜಯಪ್ಪಗೌಡ ಡಿ.ಎಸ್., (೧೯೯೪), ಅದೇ, ಪು.೨೯೧

೩೬. ಯಾಮುನಾಚಾರ್ಯ ಎಂ.(ಸಂ), (೧೯೬೨), ಅದೇ, ಪು.೧೦೦

೩೭. ಅದೇ, ಪು.೧೦೨

೩೮. ಜಯಪ್ಪಗೌಡ ಡಿ.ಎಸ್., (೧೯೯೪), ಅದೇ, ಪು.೨೬೯

೩೯. ನಾರಾಯಣಸ್ವಾಮಿ ವಿ.ಎಸ್., (೧೯೭೮), ಅದೇ, ಪು.೧೬೬

೪೦. ಸಿದ್ಧವನಹಳ್ಳಿ ಕೃಷ್ಣಶರ್ಮ(ಸಂ), (೧೯೭೧), ಅದೇ, ಪು.೫೮

೪೧. ನರಸಿಂಹಸ್ವಾಮಿ ಕೆ.ಎಸ್.(ಅನು), (೧೯೬೧), ಅದೇ, ಪು.೧೪೮

೪೨. ಜಯಪ್ಪಗೌಡ ಡಿ.ಎಸ್., (೧೯೯೪), ಅದೇ, ಪು.೨೩೯

ಅಧ್ಯಾಯ-೪

# ಮೀಸಲಾತಿ ಮತ್ತು ಜಾತಿ ಸಂಘರ್ಷಗಳ ಚಿಂತನೆ

೪.೧. ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ

೪.೨ ಪ್ರತ್ಯೇಕ ಚುನಾವಣೆಯ ಮೀಸಲಾತಿ

ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ತಮ್ಮದೇ ಆದ ದೇಶಿಯ ನೆಲೆಗಳಲ್ಲಿ ವಿಚಾರ ಮಾಡಿದ ಚಿಂತಕರು. ಇವರಿಬ್ಬರು ದೇಶದ ಅಭಿವೃದ್ಧಿಗಾಗಿ ತಮ್ಮದೇ ಆದ ದೃಷ್ಟಿಕೋನಗಳನ್ನು ಹೊಂದಿ ಆ ನಿಟ್ಟಿನಲ್ಲಿ ವಿಭಿನ್ನ ಮಾರ್ಗಗಳನ್ನು ಅನುಸರಿಸಿದರು.

ಮೂಲತಃ ಇಂಜಿನಿಯರ್ ಪದವೀಧರರಾಗಿದ್ದ ವಿಶ್ವೇಶ್ವರಯ್ಯನವರು ತಂತ್ರಜ್ಞಾನ ಮತ್ತು ಆಧುನಿಕತೆಗಳನ್ನು ಮೈಗೂಡಿಸಿಕೊಂಡಿದ್ದರು. ದೇಶವು ಈ ದಿಸೆಯಲ್ಲಿ ಮುನ್ನಡೆದರೆ ಮಾತ್ರ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯ ಎಂದು ಆಲೋಚಿಸಿದವರು. ಗಾಂಧಿ ಅವರು ಸಹ ಆರಂಭದಲ್ಲಿ ಆಧುನಿಕತೆಯನ್ನು ಅಳವಡಿಸಿಕೊಂಡವರೇ ಆಗಿದ್ದರು. ಆದರೆ ಅನಂತರದಲ್ಲಿ ಆಧುನಿಕತೆಯಿಂದ ಆಗುವ ಎಲ್ಲ ಬಗೆಯ ಪರಿಣಾಮಗಳನ್ನು ಕುರಿತು ಹಾಗೂ ಭಾರತದ ಸ್ಥಿತಿಗತಿಗಳಿಗೆ ಅನುಗುಣವಾಗಿ ಅಭಿವೃದ್ಧಿ ಹೊಂದಲು ಚಿಂತಿಸಿದರು.

ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ಸಮಕಾಲೀನರಾಗಿ ಇವರೀರ್ವರ ಜೀವನವನ್ನು ತುಲನಾತ್ಮಕವಾಗಿ ಪರಿಶೀಲಿಸಿದರೆ, ಗುಣಾವಗುಣಗಳು, ಧ್ಯೇಯ ಧೋರಣೆಗಳು, ಮಾರ್ಗಾನುಸರಣೆ ಮೊದಲಾದ ವಿಚಾರಗಳಲ್ಲಿ ಭಿನ್ನತೆ ಕಂಡುಬರುತ್ತದೆ.[1] ಆದರೆ ಪರಸ್ಪರ ಸೌಹಾರ್ದತೆ ಮತ್ತು ಮಿತ್ರತ್ವಕ್ಕೆ ಭಂಗಬರದಂತೆ ನಡೆದುಕೊಂಡರು.

ವಿಶ್ವೇಶ್ವರಯ್ಯನವರು ಒಬ್ಬ ಸರ್ಕಾರಿ ನೌಕರರಾಗಿ, ಮೈಸೂರಿನ ದಿವಾನರಾಗಿ, ದೇಶದ ಅಭಿವೃದ್ಧಿಗೆ ಕೈಗೊಂಡ ಯೋಜನೆಗಳು ಬಹಳ ಪ್ರಧಾನವಾದುವು. ಅವರಂತೆ ಗಾಂಧಿ ಅವರು ಒಬ್ಬ ಸಮಾಜ ಸುಧಾರಕರಾಗಿ, ರಾಜಕಾರಣವನ್ನು ಪ್ರವೇಶ ಮಾಡಿದರು. ಆದರೆ ಆಂಗ್ಲರ ವಿರುದ್ಧ ಸ್ವಾತಂತ್ರ್ಯ ಪಡೆಯುವುದಕ್ಕೆ ಹೋರಾಟವನ್ನು ಮಾಡುತ್ತಿದ್ದರೂ ಸಹ ದೇಶದ ಅಭಿವೃದ್ಧಿಯ ಕಡೆಗೆ ತಮ್ಮ ಗಮನವನ್ನು ಹರಿಸದೆ ಇರಲಿಲ್ಲ.

ಗಾಂಧಿ ಅವರ ಆಲೋಚನೆಗಳಿಗೆ ಯಾವುದೇ ನಿರ್ಬಂಧಗಳು ಇರಲಿಲ್ಲ. ಚಿಂತಕರಾಗಿ, ಸಮಾಜ ಸುಧಾರಕರಾಗಿ ತಾವು ಕಣ್ಣಾರೆ ಕಂಡ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದರು. ವಿಶ್ವೇಶ್ವರಯ್ಯನವರಿಗೆ ಸರ್ಕಾರಿ ನೌಕರಿಯು ನಿರ್ಬಂಧಗಳಿದ್ದವು. ತಮ್ಮ ಆಲೋಚನೆಗಳನ್ನು ಮುಕ್ತವಾಗಿ ಹಂಚಿಕೊಳ್ಳಲು

ಸಾಧ್ಯವಾಗುತ್ತಿರಲಿಲ್ಲ. ಆದರೂ ತಮ್ಮ ಮಿತಿಗಳ ನಡುವೆ ದೇಶದ ಪ್ರಗತಿಯ ಬಗ್ಗೆ ಪ್ರಯತ್ನಗಳನ್ನು ಮಾಡಿದರು. ಅಲ್ಲದೆ ಆ ದಿಸೆಯಲ್ಲಿ ಯಶಸ್ವಿಯೂ ಆದರು ಎಂದರೆ ತಪ್ಪಲ್ಲ.

## ಜಾತಿ ಮೀಸಲಾತಿಯ ಬಗೆಗಿನ ನಿಲುವುಗಳು

ಮೀಸಲಾತಿಯ ವಿಚಾರಕ್ಕೆ ಸಂಬಂಧಿಸಿದಂತೆ ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ಒಂದೇ ಬಗೆಯ ಅಭಿಪ್ರಾಯಗಳನ್ನು ಹೊಂದಿರುವುದನ್ನು ಗುರುತಿಸಬಹುದು. ಜಾತಿ ಮತ್ತು ಮೀಸಲಾತಿ ನಿಲುವುಗಳನ್ನು ಎರಡು ಧಾರೆಗಳಲ್ಲಿ ಚರ್ಚಿಸಲು ಸಾಧ್ಯವಿದೆ. ಅವು

೧. ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ

೨. ಪ್ರತ್ಯೇಕ ಚುನಾವಣೆಯ ಮೀಸಲಾತಿ.

## ೪.೧. ಶಿಕ್ಷಣ ಮತ್ತು ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ

೧೯ನೆಯ ಶತಮಾನದ ಕೊನೆ ಮತ್ತು ೨೦ನೆಯ ಶತಮಾನದ ಆರಂಭದಲ್ಲಿ ಭಾರತೀಯ ಸಮಾಜದಲ್ಲಿ ಅನೇಕ ಬಗೆಯ ಜಾಗೃತಿಗಳುಂಟಾದವು. ಆಂಗ್ಲರು ನಮ್ಮನ್ನು ಆಳುತ್ತಿದ್ದ ಸಂದರ್ಭ ಹಲವು ಬಗೆಯ ಅವಸ್ಥಾಂತರಗಳಿಗೆ ಅನುವು ಮಾಡಿಕೊಟ್ಟಿತ್ತು. ಶಿಕ್ಷಣ, ಆಡಳಿತ, ಕೋರ್ಟು, ಕಛೇರಿ, ಪೊಲೀಸ್-ರಕ್ಷಣೆ, ಪ್ರಗತಿ ಮೊದಲಾದ ಎಲ್ಲ ರಂಗಗಳಿಗೂ ಈ ಮಾತು ಅನ್ವಯ ಆಗುತ್ತದೆ. ಇಂಗ್ಲಿಷ್ ಶಿಕ್ಷಣ ಮತ್ತು ವಿಚಾರಗಳು ನಮ್ಮಲ್ಲಿ ಜಾಗೃತಿಯನ್ನು ಉಂಟುಮಾಡುವಲ್ಲಿ ಸಹಕರಿಸಿದವು. ಇದರಿಂದ ಆಂಗ್ಲರ ವಿರುದ್ಧ ಕೆಲವು ನಾಯಕರು ಜನರನ್ನು ಸಂಘಟಿಸಲು ಪ್ರಯತ್ನಿಸತೊಡಗಿದರು.

ಆಂಗ್ಲರು ಭಾರತೀಯರಲ್ಲಿ ಇಂಗ್ಲಿಷ್ ಶಿಕ್ಷಣವನ್ನು ಪಡೆದವರಿಗೆ, ತಮ್ಮ 'ಈಸ್ಟ್ ಇಂಡಿಯಾ ಕಂಪನಿ'ಯಲ್ಲಿ ಉದ್ಯೋಗವನ್ನು ಕಲ್ಪಿಸಿಕೊಟ್ಟರು. ಇಂಗ್ಲಿಷ್ ಭಾಷೆಯಿಂದಾಗಿ ಅವರು ವಿಶಾಲವಾದ ಭಾರತವನ್ನು ಆಳ್ವಿಕೆ ನಡೆಸಲು ಸಾಧ್ಯವಾಯಿತು. ಮೊದಲು ಆಂಗ್ಲಭಾಷೆ ಮತ್ತು ಪಾಶ್ಚಾತ್ಯ ಶಿಕ್ಷಣ ಕ್ರಮಕ್ಕೆ ಪ್ರಭಾವಿತರಾದವರು ಬ್ರಾಹ್ಮಣರೇ. ಇದರಿಂದಾಗಿ ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆಯಲ್ಲೂ ಅವರೇ ಹೆಚ್ಚು ಉದ್ಯೋಗಗಳನ್ನು ಪಡೆದುಕೊಳ್ಳಲು ಸಾಧ್ಯ ಆಗಿತ್ತು.

ಭಾರತವು ವೈವಿಧ್ಯತೆಗಳಿಂದ ಕೂಡಿದ್ದು ವಿಭಿನ್ನ ಪ್ರದೇಶಗಳಲ್ಲಿ, ವಿಭಿನ್ನ ಕಾಲಘಟ್ಟಗಳಲ್ಲಿ ಜನರು ಜಾಗೃತಗೊಳ್ಳುವಂತೆ ಆಗಿತ್ತು. ಅಲ್ಲದೇ ಎಲ್ಲ ಪ್ರದೇಶಗಳಲ್ಲಿ ಅಲ್ಪಸಂಖ್ಯಾತರಾದ ಬ್ರಾಹ್ಮಣರು ಜಾಗೃತರಾಗಿ ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆಯಲ್ಲಿ ಉದ್ಯೋಗಾವಕಾಶಗಳನ್ನು ಪಡೆದುಕೊಂಡಿದ್ದರು. ಬಹುಸಂಖ್ಯಾಂತರಾಗಿದ್ದ ಇತರೆ ವರ್ಗದ ಜನರು, ಹಿಂದುಳಿದ ಮತ್ತು ದಲಿತ ವರ್ಗಗಳು ಎಲ್ಲ ಸೌಲಭ್ಯಗಳಿಂದ ವಂಚಿತವಾಗಿದ್ದುದೇ ಹೆಚ್ಚು. ಅವರು ಸಾಮಾಜಿಕವಾಗಿ,

ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಬಹಳ ಹಿಂದೆ ಉಳಿದಿದ್ದರು. ಇದರ ಜೊತೆಗೆ ಹಿಂದಿನಿಂದಲೂ ಬ್ರಾಹ್ಮಣರ ಅಟ್ಟಹಾಸಕ್ಕೆ ಸಿಲುಕಿ ಅನೇಕ ತೊಂದರೆಗಳನ್ನು ಅನುಭವಿಸಿದ ಬದುಕು ಇವರದು. ಅಂದು ಸಮಾಜವು ಬಹಳ ಅಂಧಕಾರದಿಂದ ಕೂಡಿತ್ತು. ಅಲ್ಲದೆ ಮೇಲ್ವರ್ಗ ಮತ್ತು ಕೆಳವರ್ಗ ಎಂಬ ಜಾತಿ ಭೇದ-ಭಾವಗಳು ಸಹ.

ಇಂಥ ಸಮಯದಲ್ಲೇ 'ಸತ್ಯಶೋಧಕ' ಎಂಬ ಸಂಸ್ಥೆ ಸ್ಥಾಪನೆಯಾಯಿತು. ಇದರ ಸ್ಥಾಪಕ ಜ್ಯೋತಿಭಾ ಫುಲೆ. ಇದು ಸ್ಥಾಪನೆ ಆಗಿದ್ದು ೧೮೭೩ರಲ್ಲಿ. ಇವರು ಸ್ತ್ರೀ ಮತ್ತು ಕೆಳವರ್ಗದವರ ವಿರುದ್ಧವಾಗಿ ಹೋರಾಡಿದವರು. ಅಸ್ಪೃಶ್ಯತೆಯ ವಿರುದ್ಧ ಹೋರಾಟ ಮತ್ತು ಆರ್ಥಿಕ ಸಾಮಾಜಿಕ ಸುಧಾರಣೆ, ತದನಂತರ ಬ್ರಾಹ್ಮಣವಿರೋಧಿ ಚಳವಳಿಗಳಿಂದಾಗಿ ಬದಲಾವಣೆ ಹೊಂದಿತು. ಆದ್ದರಿಂದ ಇವರನ್ನು ಭಾರತದ ಪ್ರಥಮ ಸಮಾಜ ಸುಧಾರಕರೆಂದೇ ಕರೆಯಲಾಗಿದೆ.[೨]

ಈ ರೀತಿಯ ಸುಧಾರಣೆಗಳಿಂದ ಹಿಂದುಳಿದ ವರ್ಗದವರಲ್ಲಿ ಜಾಗೃತಿಯುಂಟಾಯಿತು. ಹೆಚ್ಚಿನ ಸಂಖ್ಯೆಯಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಆಳ್ವಿಕೆಯಲ್ಲಿ ಉದ್ಯೋಗ ಪಡೆಯುತ್ತಿದ್ದ, ಬ್ರಾಹ್ಮಣರಿಗೆ ವಿರುದ್ಧವಾಗಿ ಹಿಂದುಳಿದ ವರ್ಗಗಳು ಸಂಘಟಿತರಾದರು. ಅಲ್ಲದೆ ಸರ್ಕಾರಿ ಉದ್ಯೋಗಗಳಲ್ಲಿ ಮೀಸಲಾತಿಯನ್ನು ಕೊಡುವಂತೆ ಒತ್ತಾಯಿಸಲು ಆರಂಭಿಸಿದರು. ಈ ಪ್ರಕ್ರಿಯೆ ಭಾರತದ ಎಲ್ಲ ಕಡೆಗೂ, ಒಂದೇ ಬಾರಿಗೆ ಕಾಣಿಸಿಕೊಳ್ಳಲಿಲ್ಲ. ಅಲ್ಲಿನ ಪರಿಸ್ಥಿತಿ ವಾತಾವರಣಕ್ಕೆ ತಕ್ಕಂತೆ ಹಿಂದುಳಿದವರ್ಗಗಳು ಜಾಗೃತ ಆದವು. ಸರ್ಕಾರಿ ಹುದ್ದೆಗಳಲ್ಲಿ ಹೆಚ್ಚಿನ ಮೀಸಲಾತಿ ಸೌಲಭ್ಯಗಳನ್ನು ಪಡೆದಿದ್ದವರ ವಿರುದ್ಧ ಹೋರಾಡಲು ಆರಂಭಿಸಿದವು.



೧೯೦೬ರ ವೇಳೆಗೆ ದಲಿತರನ್ನು ಸಂಘಟಿಸುವ ಕೆಲಸ ಆರಂಭ ಆಗಿತ್ತು. ಅದಕ್ಕಾಗಿ 'ದಲಿತ ವರ್ಗಗಳ ಸೇವಾ ಸಂಸ್ಥೆ'ಯನ್ನು ವಿ.ಆರ್.ಶಿಂಧೆ ಎಂಬುವವರು, ನಾರಾಯಣ ಚಂದಾವರ್ಕರ್ ಮತ್ತು ಕನ್ನಡಿಗ ಕದ್ಮಲ್ ರಂಗರಾವ್ ಅವರ ಜೊತೆ ಸೇರಿ ಸ್ಥಾಪಿಸಿದರು.[೩] ಇದೇ ಸಮಯದಲ್ಲಿ ಭಾರತೀಯರು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿದ್ದರು. ಅಲ್ಲದೆ ಅನೇಕ ನಾಯಕರುಗಳು ಭಾಗವಹಿಸಿ ಜನರನ್ನು ಆಂಗ್ಲರ ವಿರುದ್ಧವಾಗಿ ಹೋರಾಡಲು ಹುರಿದುಂಬಿಸುತ್ತಿದ್ದರು. ಅವರಲ್ಲಿ ದಾದಾಬಾಯಿ ನವರೋಜಿ, ಗೋಖಲೆ, ತಿಲಕ್, ಮಾಳವೀಯ, ಸುರೇಂದ್ರನಾಥ ಬ್ಯಾನರ್ಜಿ ಮೊದಲಾದವರು ಪ್ರಮುಖರು. ಇವರಗಳ ಪ್ರಯತ್ನದಿಂದ ೧೮೮೫ರಲ್ಲಿ 'ಭಾರತ ರಾಷ್ಟ್ರೀಯ ಕಾಂಗ್ರೆಸ್' ಸ್ಥಾಪನೆ ಆಯಿತು. ಆ ಮೂಲಕ ಆಂಗ್ಲರ ವಿರುದ್ಧ ಸ್ವಾತಂತ್ರ್ಯ ಹೋರಾಟಕ್ಕಿಳಿದರು. ಅಲ್ಲದೆ ಇವರುಗಳಲ್ಲೇ ಮಂದಗಾಮಿ ಹಾಗೂ ಉಗ್ರಗಾಮಿ ಎಂಬ ಎರಡು ಪಂಗಡಗಳಾದವು. ಮಂದಗಾಮಿ ಗುಂಪು ಆಂಗ್ಲರ ಜೊತೆ ಕೈ ಜೋಡಿಸಿತು. ಇವರ ಉದ್ದೇಶ ಸರ್ಕಾರಿ ಹುದ್ದೆಗಳಲ್ಲಿ

ಅಧಿಕಾರವನ್ನು ಮತ್ತು ಹಂತಹಂತವಾಗಿ ಸ್ವಾತಂತ್ರ್ಯವನ್ನು ಪಡೆಯುವುದಾಗಿತ್ತು. ಆದರೆ ಉಗ್ರಗಾಮಿಗಳ ಗುಂಪು ಆಂಗ್ಲರ ವಿರುದ್ಧ ಹೋರಾಡಿ ಭಾರತವನ್ನು ಸ್ವಾತಂತ್ರ್ಯಗೊಳಿಸುವುದು.

ಗಾಂಧಿಯು ೧೯೧೫ರಂದು ದಕ್ಷಿಣ ಅಫ್ರಿಕಾದಿಂದ ಭಾರತಕ್ಕೆ ಬಂದರು. ಅವರು ದಕ್ಷಿಣ ಅಫ್ರಿಕಾದಲ್ಲಿ ಭಾರತೀಯರಿಗೆ ಜಯ ದೊರಕಿಸಿಕೊಟ್ಟಿದ್ದರಿಂದ ಭಾರತೀಯರು ಸಹ ಸ್ವಾಗತಿಸಿದರು. ಅವರು ಭಾರತಕ್ಕೆ ಬಂದ ನಂತರ ಎಲ್ಲ ಪ್ರದೇಶಗಳ ಜನರನ್ನು ಸಂದರ್ಶಿಸಿದರು. ಇದರಿಂದ 'ಭಾರತೀಯ ರಾಷ್ಟ್ರೀಯ ಕಾಂಗ್ರೆಸ್' ಹೊಸ ಸ್ವರೂಪವನ್ನು ಪಡೆದುಕೊಂಡಿತು. ಸ್ವಾತಂತ್ರ್ಯ ಹೋರಾಟಕ್ಕೆ ಸತ್ಯ-ಅಹಿಂಸೆ, ಸತ್ಯಾಗ್ರಹ ಎಂಬ ತತ್ತ್ವಗಳನ್ನು ಗಾಂಧಿ ಅಳವಡಿಸಿದರು. ಆ ಮೂಲಕ ಆಂಗ್ಲರ ವಿರುದ್ಧವಾಗಿ ಹೋರಾಡಬೇಕೆಂದು ಕರೆಕೊಟ್ಟರು.

ಗಾಂಧಿಯವರು ಭಾರತಕ್ಕೆ ಬಂದ ನಂತರ ಇಲ್ಲಿ ಬೇರುಬಿಟ್ಟಿದ್ದ ಸಾಮಾಜಿಕ, ಧಾರ್ಮಿಕ, ಅನಿಷ್ಟಗಳನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಅಲ್ಲದೇ ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದವರ್ಗಗಳನ್ನು ಅಭಿವೃದ್ಧಿಗೊಳಿಸಲು ಪ್ರಯತ್ನಿಸಲಾಯಿತು. ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ-

> "ಅಸ್ಪೃಶ್ಯತಾ ನಿವಾರಣೆ ಈ ದುಃಖಿತ ದೇಶದಲ್ಲಿ ತನ್ನ ವರ್ತಲದಲ್ಲಿ ಅತಿ ಹೆಚ್ಚು ಎಂದರೆ ಏಳುಕೋಟಿ ಜನರನ್ನು ತೆಗೆದುಕೊಳ್ಳುತ್ತದೆ. ಆದರೆ ನಮ್ಮಲ್ಲಿ ಎಲ್ಲರೂ ಅಸ್ಪೃಶ್ಯತಾ ನಿವಾರಣೆಯ ಕಾರ್ಯವನ್ನು ಮಾಡುವುದು ಸಾಧ್ಯವಿಲ್ಲ. ನಾವು ಅಸ್ಪೃಶ್ಯರಿಗೆ ವಿದ್ಯೆ ಕಲಿಸಬಹುದು ಅವರಿಗಾಗಿ ಬಾವಿಗಳನ್ನು ತೋಡಿಸಬಹುದು ದೇವಾಲಯಗಳನ್ನು ಕಟ್ಟಿಸಬಹುದು. ಆದರೆ ಇವುಗಳಲ್ಲಿ ಅವನನ್ನು ಸ್ಪೃಶ್ಯನನ್ನಾಗಿ ಮಾಡುವುದಿಲ್ಲ. ಅವನು ಸ್ಪೃಶ್ಯನಾಗಬೇಕಾದರೆ, ಸ್ಪೃಶ್ಯರೆನಿಸಿ ಕೊಳ್ಳುವವರು ತಮ್ಮ ಉದ್ಧತ ಔನ್ನತ್ಯದಿಂದ ಕೆಳಗಿಳಿದು ಅಸ್ಪೃಶ್ಯನನ್ನು ಸ್ಪಶ್ಯನನ್ನಾಗಿ ಮಾಡಬೇಕು"[೪]

-ಎಂದು ಹೇಳಿದ್ದಾರೆ. ಭಾರತೀಯರಲ್ಲಿ ಇರುವಂತಹ ಈ ಜಾತಿವ್ಯವಸ್ಥೆಯು ಪ್ರಮುಖವಾಗಿ ಭೇದ-ಭಾವನೆಯನ್ನುಂಟು ಮಾಡಿದೆ. ಇದಲ್ಲದೆ ಅಸ್ಪೃಶ್ಯರನ್ನು ಕಂಡು ದೂರವಿರುವಂತೆ, ಸ್ಪೃಶ್ಯ ಜನಾಂಗದವರು ವಾತಾವರಣವನ್ನು ಏರ್ಪಡಿಸಿದ್ದರು. ಹೀಗಾಗಿ ಗಾಂಧಿಯು ಅಸ್ಪೃಶ್ಯತೆಯನ್ನು ನಿವಾರಣೆ ಮಾಡಲು ಮುಂದುವರೆದ ಜನರು ಪ್ರಯತ್ನಿಸಬೇಕು ಎಂದು ಕರೆಕೊಟ್ಟರು.

ಆದರೆ ಗಾಂಧಿ ಅವರು ಸರ್ಕಾರಿ ಹುದ್ದೆಯಲ್ಲಿ ಯಾವುದೇ ಒಂದು ಜಾತಿಗೆ ಸೇರಿದವರು, ಕೆಲಸ ಮಾಡುವುದನ್ನು ವಿರೋಧಿಸಲಿಲ್ಲ. ಅವರು ಕೋಮು ಪ್ರಾತಿನಿಧ್ಯತೆಗೆ ಅವಕಾಶವಿಲ್ಲ. ಎಲ್ಲ ಜಾತಿಗಳು ಒಂದೇ. ಅವರೆಲ್ಲರೂ ಭಾರತೀಯರು ಎಂದು ಹೇಳುತ್ತಿದುದ್ದುಂಟು. ಆಡಳಿತದಲ್ಲಿ ದಕ್ಷತೆ ಇರಬೇಕು. ವ್ಯಕ್ತಿ ಯಾವುದೇ ಜಾತಿಗೆ ಸೇರಿದರೂ ಆತ ಒಳ್ಳೆಯ ಆಡಳಿತಗಾರನಾಗಿರಬೇಕು ಎಂಬುದೇ ಅವರ ನಿಲುವು. ಮುಂದುವರೆದು ಅವರೇ ಹೇಳಿರುವಂತೆ-

"ಸರ್ಕಾರ ಇಲಾಖೆಗಳಲ್ಲಿನ ನೌಕರರ ನೇಮಕದ ಮಟ್ಟಿಗೆ ಹೇಳುವುದಾದರೆ ಜಾತಿಯ ಭಾವನೆಯನ್ನು ಅಲ್ಲಿಗೆ ಹಾಯಿಸುವುದರಿಂದ ಒಳ್ಳೆಯ ಸರ್ಕಾರಕ್ಕೆ ಅದು ಮೃತ್ಯುಕಾರಕವಾಗುತ್ತದೆ. ಆಡಳಿತವು ಸಮರ್ಪಕವಾಗಿರಬೇಕಾದರೆ, ಅದು ಯಾವಾಗಲೂ ದಕ್ಷರ ಕೈಯಲ್ಲಿರಬೇಕು. ಅಲ್ಲಿ ಖಂಡಿತವಾಗಿಯು ಪಕ್ಷಪಾತವಿರಬಾರದು. ನಮಗೆ ಐವರು ಇಂಜಿನಿಯರ್‌ಗಳು ಬೇಕಾಗಿದ್ದರೆ, ನಾವು ಪ್ರತಿಯೊಂದು ಜಾತಿಯಿಂದಲೂ ಒಬ್ಬೊಬ್ಬನನ್ನು ತೆಗೆದುಕೊಳ್ಳಬಾರದು, ಅವರೆಲ್ಲರೂ ಮುಸಲ್ಮಾನರಾಗಿರಲಿ ಅಥವಾ ಪಾರ್ಸಿಗಳಾಗಿರಲಿ, ಅತ್ಯಂತ ಅರ್ಹರಾದ ಇವರನ್ನು ನಾವು ತೆಗೆದುಕೊಳ್ಳಬೇಕು, ಕೆಳಗಣ ಹುದ್ದೆಗಳನ್ನು ನಿಷ್ಪಕ್ಷಪಾತವಾದ ಮತ್ತು ವಿವಿಧ ಜಾತಿಗಳಿಗೆ ಸೇರಿದ ಸದಸ್ಯರಿಂದ ಕೂಡಿದ ಮಂಡಲಗಳ ಮೂಲಕ ಪರೀಕ್ಷೆ ಮಾಡಿಸಿ, ನೇಮಕ ಮಾಡಬೇಕು. ಆದರೆ ಪ್ರತಿಯೊಂದು ಜಾತಿಯ ಜನಸಂಖ್ಯೆಗಳಿಗನುಗುಣವಾಗಿ ಹುದ್ದೆಗಳನ್ನು ಹಂಚುವುದು ಎಂದಿಗೂ ಆಗಬಾರದು, ಶೈಕ್ಷಣಿಕವಾಗಿ ಹಿಂದುಳಿದ ಜನಾಂಗಗಳು ರಾಷ್ಟ್ರೀಯ ಸರ್ಕಾರದ ಕೈಯಲ್ಲಿ ಹೆಚ್ಚಿನ ವಿದ್ಯೆ ಸೌಕರ್ಯಗಳನ್ನು ಪಡೆಯಲು ಅರ್ಹತೆ ಹೊಂದಿಸಿ ಇದನ್ನು ಕಾರ್ಯಗತವಾಗಬಲ್ಲ ರೀತಿಯಲ್ಲಿ ಪಡೆಯಬಹುದು. ಆದರೆ ರಾಷ್ಟ್ರದ ಆಡಳಿತದಲ್ಲಿ ಜವಾಬ್ದಾರಿಯ ಸ್ಥಾನಗಳನ್ನಲಂಕರಿಸಲು ಅಪೇಕ್ಷಿಸುವವರು ನಿಗಧಿಯಾದ ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದರಿಂದ ಆ ಸ್ಥಾನಗಳಿಗೆ ತಕ್ಕ ಅರ್ಹತೆಯನ್ನು ಪಡೆಯುತ್ತಾರೆ"[೫]

-ಎಂದಿದ್ದಾರೆ. ಮೇಲಿನ ಹೇಳಿಕೆಯಲ್ಲದೆ ಮತ್ತೊಂದು ಹೇಳಿಕೆಯನ್ನು ಗಾಂಧಿ ಅವರು ಕೊಟ್ಟಿರುವುದನ್ನು ಇಲ್ಲಿ ಗಮನಿಸಬಹುದು. ಅವರ ಪ್ರಕಾರ-

"ಸ್ವತಂತ್ರ್ಯ ಭಾರತದಲ್ಲಿ ಜಾತೀಯ ಪ್ರಾತಿನಿಧ್ಯಕ್ಕೆ ಅವಕಾಶವಿಲ್ಲ ಆದರೂ ಸ್ವಾತಂತ್ರ್ಯದ ನಿಯಮವು ಅಲ್ಪಸಂಖ್ಯಾತರನ್ನು ಬಲಾತ್ಕರಿಸುವ ಆಧಾರವುಳ್ಳದಾಗಿದ್ದರೆ, ಎಲ್ಲ ಜಾತಿಗಳಿಗೂ ಅಲ್ಲಿ ಸ್ಥಳವಿರಬೇಕು ಎಂದು ಹೇಳಿದ್ದಾರೆ".[೬]

ಮೊದಲನೆಯ ಹೇಳಿಕೆಯಿಂದ ಆಡಳಿತದ ವಿಷಯದಲ್ಲಿ, ದಕ್ಷರು ಸಮರ್ಥರು ಇರುವವರನ್ನು ನೇಮಕಮಾಡಬೇಕು. ಈ ನೇಮಕದ ವಿಷಯದಲ್ಲಿ ಯಾವುದೇ ಜಾತಿಗೆ ಪ್ರಾತಿನಿಧ್ಯ ನೀಡಬಾರದು. ಪರೀಕ್ಷೆಯ ಮೂಲಕ ನೇಮಕ ಮಾಡಿದರೆ ಆಡಳಿತದಲ್ಲಿ ದಕ್ಷತೆ ಹೆಚ್ಚಾಗಿರುತ್ತದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಅನಂತರದ ತಮ್ಮ ಹೇಳಿಕೆಯಲ್ಲಿ ಗಾಂಧಿ ಅವರ ನಿಲುವು ಬದಲಾಗಿದೆ. ಅವರಿಗೆ ಭಾರತದಲ್ಲಿ ನಡೆಯುತ್ತಿದ್ದ ಸಾಮಾಜಿಕ ನ್ಯಾಯದ ಅರಿವು ಉಂಟಾಗಿ ಎಲ್ಲರಿಗೂ ಸಮಾನತೆಯನ್ನು ಒದಗಿಸಿಕೊಡಬೇಕು. ಹೀಗಾದರೆ ಮಾತ್ರ ಸಾಮಾಜವು ಸಮಾನತೆಯಿಂದ ಕೂಡಿರುತ್ತದೆ ಎಂದು ಭಾವಿಸಿದ್ದು ಗಮನಾರ್ಹವಾದುದು.

ಗಾಂಧಿ ಮತ್ತು ವಿಶ್ವೇಶ್ವರಯ್ಯನವರ ನಿಲುವುಗಳಲ್ಲಿ ಅಂಥ ವ್ಯತ್ಯಾಸಗಳೇನು ಇಲ್ಲ. ಏಕೆಂದರೆ ಎಂ.ವಿಶ್ವೇಶ್ವರಯ್ಯ ಅವರೂ ಸಹ ಆಡಳಿತದಲ್ಲಿ ದಕ್ಷರಾದವರು ಇದ್ದರೆ ಮಾತ್ರ ದೇಶವು ಅಭಿವೃದ್ಧಿ ಹೊಂದಲು ಸಾಧ್ಯ ಎಂದು ವಾದಿಸುತ್ತಿದ್ದರು.

ಅಂದಿನ ಮೈಸೂರು ಸಂಸ್ಥಾನಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ, ಗಾಂಧಿ ಅವರ ನಿಲುವುಗಳನ್ನೇ ವಿಶ್ವೇಶ್ವರಯ್ಯನವರು ಸಹ ಸಮರ್ಥಿಸಿರುವುದನ್ನು ಕಾಣಬಹುದು. ವಿಶ್ವೇಶ್ವರಯ್ಯನವರು ೧೯೧೨ರಿಂದ ಮೈಸೂರು ಸಂಸ್ಥಾನದ ದಿವಾನರಾಗಿ ನೇಮಕಗೊಂಡರು. ಸಾಮಾನ್ಯವಾಗಿ ಇಂಜಿನಿಯರ್ ಅಧಿಕಾರಿ ಯಾಗಿದ್ದು, ನಂತರ ದಿವಾನರಾಗಿ ನೇಮಕಗೊಂಡು ಆಡಳಿತವನ್ನು ಸುಭದ್ರವಾಗಿ ನಡೆಸತೊಡಗಿದ್ದರು.[೭]

ಸಂಸ್ಥಾನವು ಪ್ರತಿಯೊಂದು ಕ್ಷೇತ್ರದಲ್ಲಿಯೂ ಅಭಿವೃದ್ಧಿ ಹೊಂದಲು ಪ್ರಯತ್ನಪಟ್ಟರು. ಇವರು ಆಡಳಿತದ ವಿಷಯದಲ್ಲೂ ಆಧುನಿಕತೆಯನ್ನು ಅಳವಡಿಸಿಕೊಂಡಿದ್ದರು. ಅದರಲ್ಲೂ ಪಾಶ್ಚಾತ್ಯ ದೇಶಗಳ ಅಭಿವೃದ್ಧಿಯ ಪ್ರಭಾವಕ್ಕೆ ಒಳಗಾಗಿ, ದೇಶವು ಅದೇ ರೀತಿಯಲ್ಲಿ ಅಭಿವೃದ್ಧಿ ಹೊಂದಲು ಹಲವಾರು ಯೋಜನೆಗಳನ್ನು ಹಾಕಿಕೊಂಡಿದ್ದರು. ಅವರು ಅಂದಿನ ಕಾಲದಲ್ಲೇ, ಮುಂದಿನ ನೂರು ವರ್ಷಗಳ ಪ್ರಗತಿಯ ಹಾದಿಯ ಬಗ್ಗೆ ಚಿಂತನೆ ನಡೆಸಿದವರು. ಹೀಗಾಗಿ ದೇಶವು ಪ್ರಗತಿ ಹೊಂದಲು, ಆಧುನಿಕ ಕೃಷಿಪದ್ಧತಿ, ನೀರಾವರಿ ಸೌಲಭ್ಯ, ಕೈಗಾರಿಕೆಗಳ ಸ್ಥಾಪನೆ, ವಿದ್ಯುತ್, ರೈಲ್ವೆ ಇನ್ನು ಮೊದಲಾದ ಅನೇಕ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದರು.

ಸಂಸ್ಥಾನದಲ್ಲಿ ೧೮೯೨ರಿಂದಲೂ ಸರ್ಕಾರಿ ಅಧಿಕಾರಿಗಳ ನೇಮಕದ ವಿಷಯದಲ್ಲಿ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಲಾಗುತ್ತಿತ್ತು. ಆದರೆ ಅದು ಯಾವುದೇ ರೀತಿಯಲ್ಲೂ ಕಟ್ಟುನಿಟ್ಟಾಗಿ ನಡೆಯುತ್ತಿರಲಿಲ್ಲ. ಹೀಗಾಗಿ ವಿಶ್ವೇಶ್ವಯ್ಯನವರು ದಿವಾನರಾದ ನಂತರ, ಭ್ರಷ್ಟಚಾರ, ಲಾಭಿ, ಶಿಫಾರಸ್ಸುಗಳಿಗೆ ಅವಕಾಶ ಕಲ್ಪಿಸಿಕೊಡಲಿಲ್ಲ.[೮] ಆಡಳಿತದಲ್ಲಿನ ಹುದ್ದೆಗಳನ್ನು ನೇಮಕಮಾಡಲು ಮೈಸೂರು ಸಿವಿಲ್ ಪರೀಕ್ಷೆಯನ್ನು ಜಾರಿಗೆ ತರಲಾಯಿತು. ಈ ಪರೀಕ್ಷೆಯಲ್ಲಿ ತೇರ್ಗಡೆಯಾದವರನ್ನು ಸರ್ಕಾರಿ ಹುದ್ದೆಗಳಿಗೆ ನೇಮಕ ಮಾಡಲು ಅವಕಾಶ ಕಲ್ಪಿಸಿಕೊಟ್ಟರು. ಆಗ ಮಾತ್ರ ಆಡಳಿತದಲ್ಲಿ ದಕ್ಷತೆ ಹೆಚ್ಚಿ ದೇಶದ ಅಭಿವೃದ್ಧಿಯು ಸುಗಮವಾಗುತ್ತದೆ ಎಂಬ ಧೋರಣೆ ಇವರದು. ಆದ್ದರಿಂದಲೇ ಇವರು ಮೊದಲು ಸರ್ಕಾರಿ ಹುದ್ದೆಗಳ ನೇಮಕಾತಿಯ ವಿಷಯದಲ್ಲಿ ಮೀಸಲಾತಿ ಸೌಲಭ್ಯವನ್ನು ಅಳವಡಿಸಲು ವಿರೋಧ ವ್ಯಕ್ತಪಡಿಸಿದ್ದೇ ಹೆಚ್ಚು.[೯]

ವಿಶ್ವೇಶ್ವರಯ್ಯ ಅವರು ಅಧಿಕಾರದಲ್ಲಿದ್ದಾಗಲೇ ಮೀಸಲಾತಿಯ ಬಗ್ಗೆ ಮದ್ರಾಸಿನಲ್ಲಿ ಚಳವಳಿಗಳು ಪ್ರಾರಂಭ ಆಗಿದ್ದವು. ಅದರಲ್ಲೂ ೧೯೧೬-೧೭ರಲ್ಲಿ ಡಾ.ಟಿ.ಎಂ.ನಾಯರ್, ತ್ಯಾಗರಾಜ ಚಟ್ಟಿಯಾರ್, ಪನ್ನಗಲ್ಲಿನ ರಾಜ, ಇನ್ನು ಕೆಲವರು ಬ್ರಾಹ್ಮಣೇತರ ಚಳವಳಿಯನ್ನು ಆರಂಭಿಸಿದ್ದರು. ಅದು ಪ್ರಮುಖವಾಗಿ ಮೀಸಲಾತಿಯನ್ನು ಬ್ರಾಹ್ಮಣೇತರರಿಗೆ ಕೊಡಬೇಕೆಂದು ಆಗ್ರಹ ಪಡಿಸುವುದಾಗಿತ್ತು. ಜೊತೆಗೆ ಇದರ ಪ್ರಣಾಳಿಕೆಯನ್ನು ಹೊರತಂದರು. ಅದು 'ಬ್ರಾಹ್ಮಣೇತರರ ಪ್ರಣಾಳಿಕೆ' ಎಂದೇ ಪ್ರಖ್ಯಾತವಾಯಿತು. ಮುಂದೆ ಇದು 'ಜಸ್ಟೀಸ್ ಪಾರ್ಟಿ' ಎಂದು ಹೆಸರು ಪಡೆಯಿತು. ತಮ್ಮ ಉದ್ದೇಶಗಳನ್ನು ವ್ಯಕ್ತಪಡಿಸಲು ಮತ್ತು ಹಿಂದುಳಿದ ವರ್ಗದ ಜನರನ್ನು ಒಂದುಗೂಡಿಸಿ ಚಳವಳಿಯನ್ನು ಪ್ರಾರಂಭಿಸಲು 'ಜಸ್ಟೀಸ್' ಎಂಬ ಪತ್ರಿಕೆಯನ್ನೂ ಹೊರಡಿಸಿದರು.

ಈ ಪಕ್ಷದ ಉದಯಕ್ಕೆ ಪ್ರಮುಖ ಕಾರಣಗಳಲ್ಲೊಂದು ಸರ್ಕಾರಿ ಹುದ್ದೆಗಳಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಬ್ರಾಹ್ಮಣರೇ ಸೌಲಭ್ಯ ಹಾಗೂ ಹುದ್ದೆಗಳನ್ನು ಪಡೆದಿದ್ದು. ಬಹುಸಂಖ್ಯಾತರಾದ ಕೆಳವರ್ಗ ಮತ್ತು ಹಿಂದುಳಿದವರ್ಗಗಳವರು ಯಾವುದೇ ಸೌಲಭ್ಯಗಳನ್ನು ಸರಿಯಾಗಿ ಪಡೆದಿರಲಿಲ್ಲ.

ಅಲ್ಲದೆ ಅಲ್ಪಸಂಖ್ಯಾತರಾದ ಬ್ರಾಹ್ಮಣರೇ ಹೆಚ್ಚು ಸ್ಥಾನವನ್ನು ಪಡೆದು, ಬಹು ಸಂಖ್ಯಾತರಾಗಿದ್ದ ಹಿಂದುಳಿದವರ್ಗದವರನ್ನು ನಿರ್ಲಕ್ಷಿಸಿದ್ದರು. ಈ ತಾರತಮ್ಯದಿಂದ ಹಿಂದುಳಿದ ವರ್ಗಗಳ ನಾಯಕರು ಮದ್ರಾಸಿನಲ್ಲಿ ಚಳವಳಿಯನ್ನು ಬ್ರಾಹ್ಮಣರ ವಿರುದ್ಧ ತೀವ್ರಗೊಳಿಸಿದ್ದರು. ೧೯೧೭ ಮದ್ರಾಸಿನಲ್ಲಿ ನಡೆದ ಪ್ರಥಮ ಬ್ರಾಹ್ಮಣೇತರ ಸಮ್ಮೇಳನದಲ್ಲಿ ರಾಜಾ ವೆಂಕಟಗಿರಿಯವರು ಮಾತನಾಡುತ್ತಾ-

> "ಭಾರತದಂಥ ನಾಡಿನಲ್ಲಿ ಸರ್ಕಾರಿ ನೌಕರರು ಅತ್ಯಂತ ಪ್ರಭಾವಶಾಲಿಗಳಾಗಿರುವುದರಿಂದ, ಅಧಿಕಾರ ವರ್ಗದಲ್ಲಿ ಯಾವುದೇ ಒಂದು ವರ್ಗದ ಅಧಿಕ್ಯವಾದಾಗ ಆ ವರ್ಗಕ್ಕೆ ಅನುಚಿತ ಪ್ರಾಮುಖ್ಯ ಹಾಗೂ ಪ್ರಭಾವ ದೊರೆಯುತ್ತದೆ"

-ಎಂದು ಹೇಳಿದ್ದಾರೆ.[೧೦]

ಮದ್ರಾಸಿನಲ್ಲಿದ್ದಂಥ ಪರಿಸ್ಥಿತಿಯೆ ಮೈಸೂರು ಸಂಸ್ಥಾನದಲ್ಲಿಯೂ ಇತ್ತು. ಬ್ರಾಹ್ಮಣರೆ ಹೆಚ್ಚು ಪ್ರಾಬಲ್ಯ ಪಡೆದು ಸರ್ಕಾರಿ ಹುದ್ದೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಹೀಗಾಗಿ ಹಿಂದುಳಿದ ಹಾಗೂ ದಲಿತ ವರ್ಗಗಳಿಗೆ ಸರಿಯಾದ ಸೌಲಭ್ಯ ದೊರಕಿರಲಿಲ್ಲ. ಈ ಹಿನ್ನೆಲೆಯಲ್ಲಿ ಪ್ರಭಾವಿತರಾದ ಚನ್ನಯ್ಯ, ಎಂ.ಬಸವಯ್ಯ, ರಾವ್‌ಸಾಹೇಬ್, ಗುಲಾಮ ಮಹಮದ್ ಇನ್ನು ಮೊದಲಾದ ಬ್ರಾಹ್ಮಣೇತರರನ್ನು ಸಂಘಟಿಸಲು ಪ್ರಯತ್ನಿಸಿದರು.[೧೧] ಇವರುಗಳು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ೧೯೧೭ರಲ್ಲಿ 'ಪ್ರಜಾಮಿತ್ರ ಮಂಡಲಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು.[೧೨]

ಈ ಸಂಸ್ಥೆಯು ಸಂಸ್ಥಾನದಲ್ಲಿ ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿಯನ್ನು ಕೊಡಬೇಕೆಂದು ಒತ್ತಾಯಪಡಿಸುತ್ತಿತ್ತು. ಇಂಥ ಸಮಯದಲ್ಲೇ ವಿಶ್ವೇಶ್ವರಯ್ಯನವರು ದೇಶದ ಅಭಿವೃದ್ಧಿಗೆ ಅನೇಕ ಯೋಜನೆಗಳನ್ನು ಹಾಕಿ, ಅವುಗಳನ್ನು ಕಾರ್ಯಗತಗೊಳಿಸುತ್ತಿದ್ದರು. ಸರ್ಕಾರಿ ಹುದ್ದೆಗಳಲ್ಲಿ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ನೇಮಕಗೊಂಡರೆ ಸಮರ್ಥರು, ದಕ್ಷರು, ನೀತಿವಂತರು, ಬುದ್ಧಿವಂತ ತರುಣರು ಅಧಿಕಾರ ವಹಿಸಿಕೊಳ್ಳುತ್ತಾರೆ, ಹೀಗಾಗಿ ದೇಶವು ಅಭಿವೃದ್ಧಿ ಹೊಂದುತ್ತದೆ ಎಂಬ ದೃಢ ನಿಲವು ಇವರದಾಗಿತ್ತು.

ಆದರೆ ಮಹಾರಾಜರು ಮೀಸಲಾತಿಯ ಪರವಾಗಿದ್ದವರು, ಹೀಗಾಗಿ ಅವರು "ಬ್ರಾಹ್ಮಣೇತರ ವರ್ಗಗಳಿಗೆ ಕೊಡುವ ಅವಕಾಶಗಳಿಗೆ ಆಡಳಿತ ಕಾರ್ಯ ಸಮರ್ಥತೆಯನ್ನು ಕುಂಠಿಸುತ್ತದೆ" ಎನ್ನುವ ವಿಶ್ವೇಶ್ವರಯ್ಯನವರ ನಿಲುವನ್ನು ಒಪ್ಪಲಿಲ್ಲ. ಅಲ್ಲದೇ ಮಹಾರಾಜರು ಈ ವರ್ಗಕ್ಕೆ ಪ್ರಾತಿನಿಧ್ಯ ಕೊಡಬೇಕನ್ನುವ ತಮ್ಮ ನಿಲುವನ್ನು ಸ್ಪಷ್ಟಿಪಡಿಸಿದರು.[೧೩]

ವಿಶ್ವೇಶ್ವರಯ್ಯನವರು ಒತ್ತಡಕ್ಕೆ ಮಣಿದು ೧೯೧೯ರಂದು ಸರ್ಕಾರಿ ಹುದ್ದೆಯಲ್ಲಿ ಶೇ. ೨೫ ಮೀಸಲಾತಿಯನ್ನು ಕೊಡಲು ನಿರ್ಧರಿಸಿದರು.[೧೪] ಆದರೆ ಇದರಿಂದ ತೃಪ್ತರಾಗದ, ಹಿಂದುಳಿದ ವರ್ಗವು

ಶೇ. ೩೩ ರಷ್ಟು ಮೀಸಲಾತಿ ಕೊಡಬೇಕೆಂದು ಒತ್ತಾಯಿಸತೊಡಗಿತು. ಇದರಿಂದಾಗಿ ತಾವು ಹಾಕಿಕೊಂಡಿದ್ದ ಯೋಜನೆಗಳಿಗೆ ಧಕ್ಕೆಯುಂಟಾಗುತ್ತದೆ ಎಂದು ವಿಶ್ವೇಶ್ವರಯ್ಯನವರು ಅನುಮಾನಿಸಿದರು. ಅಲ್ಲದೆ ತಮ್ಮನ್ನು ಮಹಾರಾಜರು ಕೂಡ ವಿರೋಧಿಸುತ್ತಿದುದ್ದನ್ನು ಗಮನಿಸಿದರು. ಆಂಗ್ಲ ರೆಸಿಡೆಂಟರು ಸಹ ವಿಶ್ವೇಶ್ವರಯ್ಯನವರು ಹಾಕಿಕೊಂಡಿದ್ದ ಯೋಜನೆಗಳನ್ನು ವಿರೋಧಿಸುತ್ತಿದ್ದುದುಂಟು. ಹೀಗಾಗಿ ನೊಂದುಕೊಂಡ ವಿಶ್ವೇಶ್ವರಯ್ಯನವರು ೧೯೧೮ರಲ್ಲಿ ರಜೆಹಾಕಿ ವಿದೇಶಕ್ಕೆ ಹೊರಟರು. ತದನಂತರ ೧೯೧೯ ಜೂನ್ ೯ ರಂದು ಅಧಿಕೃತವಾಗಿ ನಿವೃತ್ತರಾದರು.[೧೫]

ಒಬ್ಬ ಮುಖ್ಯ ಇಂಜಿನಿಯರ್ ಆಗಿ, ದಿವಾನರಾಗಿ ಆಡಳಿತವನ್ನು ಉತ್ತಮವಾಗಿ ನಿರ್ವಹಿಸಿದ್ದವರು. ಇವರು ಒಬ್ಬ ನಿಸ್ವಾರ್ಥ ವ್ಯಕ್ತಿಯಾಗಿದ್ದರು. ಅವರು-

> "ನಾನು ಐದು ವರ್ಷಗಳ ಕಾಲವಾದರೂ ಇಲ್ಲಿದ್ದು ನನ್ನ ಕೈಯಲ್ಲಾದ ಕೆಲಸ ಮಾಡಲು ಅನುಕೂಲಿಸಿದ್ದು ಯಾವುದರಿಂದ ಗೊತ್ತಿದೆಯೆ? ನನ್ನ ಜೇಬಿನಲ್ಲಿ ಯಾವಾಗಲೂ ರಾಜೀನಾಮೆ ಚೀಟಿ ಸಿದ್ಧವಾಗಿಟ್ಟು ಕೊಂಡಿದ್ದರಿಂದ. ನನ್ನ ತತ್ವಕ್ಕೆ ಭಂಗ ಬರುವುದಾದರೆ ನಾನು ಸ್ಥಳ ಬಿಟ್ಟು ಹೊರಡಲು ಸಿದ್ಧ. ಇದನ್ನು ನಾನು ಶ್ರೀ ಮನ್ಮಹಾರಾಜರವರಿಗೆ ಸ್ಪಷ್ಟಪಡಿಸಿದ್ದೆ"[೧೬]

-ಎಂದು ಡಿ.ವಿ.ಜಿ.ಯವರಲ್ಲಿ ಹೇಳಿಕೊಂಡಿದ್ದಾರೆ. ವಿಶ್ವೇಶ್ವರಯ್ಯನವರಿಗೆ ದೇಶದ ಅಭಿವೃದ್ಧಿಯೇ ಪ್ರಧಾನವಾಗಿತ್ತು. ಆದರೆ ಅವರು ಸಾಮಾಜಿಕವಾಗಿ ಆಲೋಚಿಸಿದ್ದರೆ. ಮೀಸಲಾತಿಯ ವಿಷಯದಲ್ಲಿ ಕಠಿಣವಾಗಿ ಚಿಂತಿಸುತ್ತಿರಲಿಲ್ಲವೇನೋ. ಈ ವಿಚಾರದಲ್ಲಿ ವಿಶ್ವೇಶ್ವರಯ್ಯನವರು ತಮ್ಮ ನಿಲುವನ್ನು ಇನ್ನಷ್ಟು ಸಡಿಲಿಸಬೇಕಾಗಿತ್ತು ಅನ್ನಿಸುತ್ತದೆ. ಏಕೆಂದರೆ ಅಂದಿನ ಸಮಾಜದಲ್ಲಿ ಶಿಕ್ಷಣವನ್ನು ಪಡೆಯುವುದಕ್ಕೆ ಹಿಂದುಳಿದ ವರ್ಗ ಮತ್ತು ದಲಿತರಿಗೆ ಸರಿಯಾದ ವ್ಯವಸ್ಥೆಯಿರಲಿಲ್ಲ. ಯಾವುದೇ ಒಂದು ಆಡಳಿತದ ಘಟಕದಲ್ಲಿ ಕೆಳವರ್ಗದವರಿಗೂ ಅವಕಾಶ ಕಲ್ಪಿಸಿಕೊಟ್ಟರೆ ಅವರು ಸಹ ತಮ್ಮ ಅನುಭವದಿಂದ ದಕ್ಷತೆಯನ್ನು ಮೈಗೂಡಿಸಿಕೊಂಡು ಆಡಳಿತವನ್ನು ನಿರ್ವಹಿಸಬಲ್ಲರು ಎಂಬುದು ಇಲ್ಲಿ ಮುಖ್ಯ ಅನ್ನಿಸುತ್ತದೆ.

ವಿಶ್ವೇಶ್ವರಯ್ಯನವರು ನಿವೃತ್ತರಾದ ನಂತರ, ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಮಾವಂದಿರು ಹಾಗೂ ಸಂಸ್ಥಾನದ ಮಂತ್ರಿಗಳು ಆಗಿದ್ದ ಕಾಂತರಾಜ ಅರಸ ಒಡೆಯರನ್ನು ನೇಮಕ ಮಾಡಿದರು. ಇವರು ಅಂದಿನ ಪರಿಸ್ಥಿತಿಯನ್ನು ಅರಿತುಕೊಂಡು ಹೆಚ್ಚು ಮೀಸಲಾತಿಯನ್ನು ಒದಗಿಸಿಕೊಟ್ಟರು. ಅಲ್ಲದೇ ಇವರಲ್ಲಿ ದೀನ-ದಲಿತರ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿಯ ಬಗೆಗೆ ಇದ್ದ ಕಾಳಜಿಯನ್ನು ಯಾರು ಪ್ರಶ್ನಿಸುವಂತಿರಲಿಲ್ಲ. ಹೆಚ್ಚಿನ ಮಟ್ಟಿಗೆ ಅವರು ಈ ವರ್ಗಗಳ ಶ್ರೇಯೋಭಿವೃದ್ಧಿಗೆ ದುಡಿದರು.

## ೪.೨. ಪ್ರತ್ಯೇಕ ಚುನಾವಣೆಯ ಮೀಸಲಾತಿ

ದೀನ-ದಲಿತರ ಪ್ರಗತಿಗಾಗಿ ಶ್ರಮಿಸಿದವರಲ್ಲಿ ಜ್ಯೋತಿಭಾ ಪುಲೆ ಅವರು ಮೊದಲಿಗರು. ಇವರು ೧೯೫೧ರಲ್ಲೇ ಕೈಗೊಂಡ ಸುಧಾರಣೆಗಳಿಂದಾಗಿ ಭಾರತೀಯ ಸಮಾಜವು ಸ್ವಲ್ಪಮಟ್ಟಿಗಾದರೂ ಬದಲಾಗಲು ಸಾಧ್ಯ ಆಯಿತು. ಇವರ ಚಿಂತನೆ, ಚಟುವಟಿಕೆಗಳೇ ಮುಂದೆ ಬ್ರಾಹ್ಮಣೇತರ ಚಳುವಳಿಗೂ ಕಾರಣವಾಯಿತು ಎಂದರೆ ತಪ್ಪಿಲ್ಲ.

ಫುಲೆಯವರು ಕೈಗೊಂಡ ಸುಧಾರಣೆಗಳಿಂದ ಪ್ರಭಾವಿತರಾದವರ ಪೈಕಿ ಅಂಬೇಡ್ಕರ್ ಸಹ ಒಬ್ಬರು. ಈ ಹಿನ್ನೆಲೆಗಳಿಂದಲೇ ಶೋಷಿತ ವರ್ಗಗಳಿಗೂ ಹೆಚ್ಚು ಸೌಲಭ್ಯವನ್ನು ಒದಗಿಸಿಕೊಡುವಲ್ಲಿ ಮುಂದೆ ಸಾಧ್ಯವಾಗಿದ್ದು. ಅಂಬೇಡ್ಕರ್ ವಿದೇಶದಿಂದ ಬಂದ ನಂತರ ರಾಜಕಾರಣವನ್ನು ಪ್ರವೇಶಿಸಿದರು. ಇದರಿಂದಾಗಿ ಚಳವಳಿ ಒಂದು ರಾಜಕೀಯ ಸ್ವರೂಪ ಹೊಂದಿ, ಹೊಸ ತಿರುವು ಪಡೆದುಕೊಂಡಿತು. ಇವರ ಆಗಮನಕ್ಕೆ ಮುನ್ನ ಚಳವಳಿಯ ಸ್ವರೂಪ ವ್ಯವಸ್ಥಿತವಾಗಿ ಇರಲಿಲ್ಲ.

ಅಂಬೇಡ್ಕರ್ ಶೋಷಿತ ದಲಿತ ಜನಾಂಗದಲ್ಲಿ ಹುಟ್ಟಿದವರು. ಆದ್ದರಿಂದ ಶೋಷಿತರ ಮತ್ತು ಹಿಂದುಳಿದ ಜನರ ನೋವು ನಲಿವುಗಳನ್ನು ಸ್ವತಃ ಅನುಭವಿಸಿದ್ದರು. ಈ ಹಿನ್ನೆಲೆಗಳಿಂದಾಗಿ ಅವರು ೧೯೧೮ರಲ್ಲಿ ದಲಿತರಿಗಾಗಿ ಪ್ರತ್ಯೇಕ ಚುನಾವಣೆಯನ್ನು ಮತ್ತು ಮೀಸಲಾತಿಯನ್ನು ಕೊಡುವಂತೆ ಆಂಗ್ಲ ಸರ್ಕಾರಕ್ಕೆ ಮನವಿಸಲ್ಲಿಸಿದರು. ಅಂದರೆ ವಿಧಾನ ಪರಿಷತ್ತಿನ ಸ್ಥಾನಗಳಿಗೆ ನಡೆಯುವ ಚನಾವಣೆಗಳಲ್ಲಿ ದಲಿತರ ಪ್ರತಿನಿಧಿಗಳನ್ನು ದಲಿತರೇ ಚುನಾಯಿಸುವ ಹಕ್ಕು ಮತ್ತು ಜನಸಂಖ್ಯೆಯ ಆಧಾರದ ಮೇಲೆ ಪ್ರಾತಿನಿಧ್ಯ ಕೊಡಬೇಕೆಂದು ಕೇಳಿಕೊಂಡರು.[೧೭]

ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದಾಗ ಕೈಗೊಂಡ ಕಾರ್ಯಕ್ರಮಗಳು ಹಲವು. ಅವರು ಅಸ್ಪೃಶ್ಯತೆಯನ್ನು ಹೋಗಲಾಡಿಸುವ ದಿಸೆಯಲ್ಲಿ ಆ ಜನವರ್ಗಗಳಿಗೆ ಶಿಕ್ಷಣದ ಸೌಲಭ್ಯಗಳನ್ನು ಒದಗಿಸಿಕೊಟ್ಟರು. ಇದಕ್ಕೆ ಸವರ್ಣೀಯ ಹಿಂದುಗಳ ಪ್ರತಿರೋಧವು ಇಲ್ಲದೆ ಇರಲಿಲ್ಲ. ಅಂಥ ಸಮಯದಲ್ಲಿ ಅವರು ೧೯೧೫ರಲ್ಲಿ ಸರ್ಕಾರದ ಒಂದು ಸುತ್ತೋಲೆಯನ್ನು ಹೊರಡಿಸಿದರು. ಆ ಮೂಲಕ ಸಾರ್ವಜನಿಕವಾಗಿ ಮತ್ತು ಧಾರ್ಮಿಕವಾಗಿ ನಿರ್ಬಂಧವನ್ನು ಹಾಕಿ ಸಾರ್ವಜನಿಕೆ ಶಾಲೆಗಳಿಗೆ ಸೇರುವುದಕ್ಕೆ ಆದ್ಯತೆ ನೀಡಿದರು.[೧೮] ಈ ನಿಟ್ಟಿನಲ್ಲಿ ಅಸ್ಪೃಶ್ಯರಿಗೆ ವಿದ್ಯಾರ್ಥಿ ವೇತನ ಮತ್ತು ವಿದ್ಯಾರ್ಥಿ ನಿಲಯಗಳನ್ನು ಸೌಲಭ್ಯಗಳು ದೊರೆಯಲಾರಂಭಿಸಿದ್ದವು.

ವಿಶ್ವೇಶ್ವರಯ್ಯನವರು ಅಸ್ಪೃಶ್ಯರ ಶಿಕ್ಷಣದ ಮತ್ತು ಅವರ ಸ್ಥಾನಮಾನಗಳ ಬಗ್ಗೆ ಮಾತನಾಡುತ್ತಾ-

> "ಅಸ್ಪೃಶ್ಯರ ಸ್ಥಾನಮಾನವನ್ನು ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಉತ್ತಮ ಪಡಿಸಬೇಕಾದರೆಯ... ಕೆಳವರ್ಗದವರು ಸಂಪತ್ತನ್ನು ಗಳಿಸಲು ಅವಕಾಶ ಕಲ್ಪಿಸಿಕೊಟ್ಟರೆ, ಉತ್ತಮ ವರ್ಗದ ಜನ ಅವರ ಕೈಕೆಳಗೆ ಕೆಲಸ ಮಾಡುತ್ತಾರೆ. ಆಗ ಅವರ ಸ್ಥಾನಮಾನ ಅನಿವಾರ್ಯವಾಗಿ ಉತ್ತಮಗೊಳ್ಳುತ್ತದೆ ಮತ್ತು ಅವರು ಸಾರ್ವಜನಿಕವಾಗಿ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ ಮೇಲ್ವರ್ಗದವರೊಂದಿಗೆ ಸಮನಾಗಿ ಭಾಗವಹಿಸಲು ಸಾಧ್ಯವಾಗುತ್ತದೆ"[೧೯]

-ಎಂದು ಹೇಳುವ ಮೂಲಕ ಶಿಕ್ಷಣಕ್ಕೆ ಹೆಚ್ಚಿನ ಅವಕಾಶಕೊಟ್ಟರು. ಆರ್ಥಿಕವಾಗಿ ಹಿಂದುಳಿದ ಅಸ್ಪೃಶ್ಯರು ಅಂದು ಹೆಚ್ಚಿನ ಅವಕಾಶಗಳನ್ನು ಪಡೆಯಲು ಸಾಧ್ಯ ಆಗುತ್ತಿರಲಿಲ್ಲ ಎಂಬುದು ಬೇರೆ ಮಾತು.

ವಿಶ್ವೇಶ್ವರಯ್ಯ ಅವರು ಅಸ್ಪೃಶ್ಯರ ನಿವಾರಣೆಗೆ ಶಿಕ್ಷಣಕ್ಕೆ ಆದ್ಯತೆ ನೀಡಿದಷ್ಟು ಸುಲುಭವಾಗಿ ಪ್ರತ್ಯೇಕ ಚುನಾವಣೆಯ ಮೀಸಲಾತಿಯ ವಿಚಾರವನ್ನು ಕುರಿತು ಬೆಂಬಲಿಸಲಿಲ್ಲ. ಅವರು ಈ ಪ್ರತ್ಯೇಕ ಚುನಾವಣಾ ಪದ್ಧತಿಗೆ ಸಂಬಂಧಿಸಿದಂತೆ-

> "ಪ್ರತ್ಯೇಕ ಜಾತಿಯ ಮತದಾನ ಪದ್ಧತಿಗೆ ಎಡೆಗೊಡಬಾರದು. ಈ ಭಾವನೆ ರಾಷ್ಟ್ರೀಯ ಹಿತಕ್ಕೆ ವಿರುದ್ಧ. ಪ್ರಗತಿಗೆ ವಿರೋಧ, ಬಹಳ ಅವಶ್ಯಕವಾದರೆ, ವಿಶೇಷ ಸಂದರ್ಭಗಳಲ್ಲಿ ಹಿಂದುಳಿದ ಪಂಗಡಗಳಿಗೆ ಸ್ಥಾನ ಕೊಡಬಹುದು. ಓಟು ಕೊಡುವ ಪ್ರತಿ ಮತದಾತನಿಗೂ ಅಕ್ಷರ ಜ್ಞಾನವಾದರೂ ಇರಬೇಕು ಆದರೆ ಯಾವಕಾರಣದಿಂದಲೂ ಈ ಅವಧಿ ಹತ್ತು ವರ್ಷ ಮೀರಬಾರದು"[೨೦]

-ಎಂದು ಹೇಳಿರುವುದನ್ನು ಗಮನಿಸಬಹುದು.

ವಿಶ್ವೇಶ್ವರಯ್ಯನವರು ದೇಶದ ಪ್ರಗತಿಗೆ ಅಕ್ಷರ ಕಲಿತವರು ಓಟು ಹಾಕಬೇಕು ಎಂದಿದ್ದಾರೆ. ಏಕೆಂದರೆ ಅಕ್ಷರ ಪಡೆದವರು ಚುನಾವಣ ಅಭ್ಯರ್ಥಿಯಾದವರನ್ನು ಆಯ್ಕೆ ಮಾಡುವಾಗ, ಉತ್ತಮ ಅಭ್ಯರ್ಥಿಯನ್ನು ಆಯ್ಕೆ ಮಾಡಲು ಸಾಮರ್ಥ್ಯ ಬರುತ್ತದೆ ಎಂಬ ನಿಲುವು ಅವರದು. ಅಂದು ಹಿಂದುಳಿದ ವರ್ಗಗಳಿಗೆ ಶಿಕ್ಷಣದ ಸೌಲಭ್ಯ ದೊರಕಿರಲಿಲ್ಲ. ಇಂದಿಗೂ ಆ ಸಮಸ್ಯೆ ಹಾಗೆಯೇ ಮುಂದುವರೆದಿದ್ದು ಪೂರ್ಣವಾಗಿ ಬಗೆಹರಿದಿಲ್ಲ. ಈ ದಿಸೆಯಲ್ಲಿ ಸರ್ಕಾರದ ಜವಾಬ್ದಾರಿ ಇನ್ನಷ್ಟು ಹೆಚ್ಚಬೇಕು. ಅಂತೆಯೇ ವಯಸ್ಕರ ಶಿಕ್ಷಣವನ್ನು ಇನ್ನು ಉತ್ತಮವಾಗಿ ನಿರ್ವಹಿಸಬೇಕು. ಜನಸಂಖ್ಯೆಯ ಆಧಾರದ ಮೇಲೆ ಹಿಂದುಳಿದ ವರ್ಗದವರಿಗೆ ಚುನಾವಣೆಯ ಮೂಲಕ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಪ್ರಾತಿನಿಧ್ಯ ಕಲ್ಪಿಸಬೇಕಿದೆ.

ವಿಶ್ವೇಶ್ವರಯ್ಯನವರಂತೆ ಗಾಂಧಿ ಅವರು ಸಹ ಪ್ರತ್ಯೇಕ ಮೀಸಲಾತಿಯ ಚುನಾವಣಾ ವ್ಯವಸ್ಥೆಯನ್ನು ರಾಷ್ಟ್ರೀಯ ಮಟ್ಟದಲ್ಲಿ ವಿರೋಧಿಸುವುದನ್ನು ಗಮನಿಸಬಹುದು. ಗಾಂಧಿಯು ಭಾರತಕ್ಕೆ ಬಂದು ನಂತರ ಭಾರತದಲ್ಲೆಲ್ಲ ಸಂಚರಿಸಿದರು. ಆಂಗ್ಲರ ವಿರುದ್ಧವಾಗಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ವತಿಯಿಂದ ಜನರನ್ನು ಸಂಘಟಿಸಲಾರಂಭಿಸಿದ್ದರು. ಅದು ಎಷ್ಟರ ಮಟ್ಟಿಗೆ ಎಂದರೆ ಅವರು ಆಶ್ರಮವನ್ನು ತೆರೆದಾಗ ಒಂದು ಬಡ ಅಸ್ಪೃಶ್ಯ ಕುಟುಂಬ ಬಂದು ಅವರನ್ನು ಸೇರಿಕೊಳ್ಳಲು ಬಯಸಿತು. ಆಗ ಗಾಂಧಿ ತಮ್ಮ ಸಂಗಡಿಗರಿಂದಲೇ ಅನುಮತಿಯನ್ನು ನಿರೀಕ್ಷಿಸುವಂತೆ ಆಯಿತು. ತದನಂತರ ಅವರು ಆಶ್ರಮವು ಅಸ್ಪೃಶ್ಯತೆಯನ್ನು ಒಪ್ಪುವುದಿಲ್ಲ ಎಂದು ಸಾರಿ, ಆಶ್ರಮಕ್ಕೆ ಸಹಾಯ ಮಾಡುವವರನ್ನು ಪರೋಕ್ಷವಾಗಿ ಎಚ್ಚರಿಸಿದ್ದರು.[೨೧] ಆದರೂ ಸಹ ಗಾಂಧಿ ಅಸ್ಪೃಶ್ಯತೆಯ ನಿವಾರಣೆಗೆ ಆರಂಭದಲ್ಲಿ ಸಂಪೂರ್ಣವಾಗಿ ತಮ್ಮನ್ನು ತಾವು ತೊಡಗಿಸಿಕೊಂಡಿರಲಿಲ್ಲ. ಹಾಗೆ ಸಂಪೂರ್ಣವಾಗಿ

ಅವರು ತೊಡಗಿಸಿಕೊಂಡಿದ್ದು ಅಂಬೇಡ್ಕರ್ ಅವರು ಚಳವಳಿಗೆ ಧುಮುಕಿದ ನಂತರವೇ.ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ ವತಿಯಿಂದ ಕೆಲವೊಂದು ಕಡೆ ಅಸ್ಪೃಶ್ಯತೆಯನ್ನೇ ಹೋಗಲಾಡಿಸಲು ಪ್ರಯತ್ನಗಳು ನಡೆದವು. ಇದೇ ಸಮಯದಲ್ಲೇ ಲಂಡನ್ನಿನಲ್ಲಿ ದುಂಡುಮೇಜಿನ ಸಮ್ಮೇಳನ ನಡೆಸಲಾಯಿತು. ಅಲ್ಲಿ ನೀಡಿದ ತೀರ್ಪಿನಿಂದಾಗಿ ಗಾಂಧಿ ಅವರು ಭಾರತದಲ್ಲಿ ಸಂಪೂರ್ಣವಾಗಿ ಅಸ್ಪೃಶ್ಯತೆಯನ್ನು ನಿವಾರಿಸಲು ಹಠತೊಟ್ಟರೆಂದು ಹೇಳಬಹುದು.

ಭಾರತದಲ್ಲಿ ಸ್ವಾತಂತ್ರ್ಯ ಚಳವಳಿಯು ತೀವ್ರವಾಗಿತ್ತು. ಇಂಥ ಸನ್ನಿವೇಶದಲ್ಲಿಯೇ ಸಂವಿಧಾನದ ಸ್ವರೂಪವನ್ನು ಮಾರ್ಪಾಡು ಮಾಡುವುದಕ್ಕೆ, ಲಂಡನ್ನಿನಲ್ಲಿ ಆಂಗ್ಲರು ದುಂಡುಮೇಜಿನ ಸಮ್ಮೇಳನವನ್ನು ಏರ್ಪಾಡು ಮಾಡಿದರು. ಈ ಸಮ್ಮೇಳನದಲ್ಲಿ ಗಾಂಧಿ, ಅಂಬೇಡ್ಕರ್, ಜಿನ್ನಾ, ಸರೋಜಿನಿನಾಯ್ಡು, ಮಾಳವೀಯ ಇನ್ನು ಮುಂತಾದವರು ಭಾಗವಹಿಸಿದ್ದರು. ೧೯೩೧ರ ಈ ಸಭೆಯಲ್ಲಿ ಅಂಬೇಡ್ಕರ್ "ನಿಮ್ನರಿ[ಹರಿಜನ]ಗಾಗಿ ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿರಬೇಕು" ಎಂದು ಪ್ರಬಲವಾಗಿ ವಾದಿಸುತ್ತಾರೆ. ಅಂಬೇಡ್ಕರ್ ಅವರ ಈ ನಿಲುವನ್ನು ಗಾಂಧಿ ತೀವ್ರವಾಗಿ ವಿರೋಧಿಸಿದ್ದು ಉಂಟು. ಅಷ್ಟೇ ಅಲ್ಲದೇ ಗಾಂಧಿ-

> "ಇಡೀ ವಿಶ್ವದ ಬಡತನವನ್ನು ನನಗೆ ಒಪ್ಪಿಸುತ್ತಾ, ಭಾರತಕ್ಕೆ ಸ್ವಾತಂತ್ರ್ಯ ಕೊಡುತ್ತೇವೆಂದರೂ, ಅಸ್ಪೃಶ್ಯತೆಯ ಸಮಸ್ಯೆಯನ್ನು ನಾನು ಮಾರಿಕೊಳ್ಳಲು ಬದಲಾಯಿಸಿಕೊಳ್ಳಲು ಸಾಧ್ಯವಿಲ್ಲ"[೭೭]

-ಎಂದು ಹೇಳುತ್ತಾರೆ. ಅಲ್ಲದೆ ಅವರು ಕೋಮುವಾರು ಪ್ರಾತಿನಿಧ್ಯವನ್ನು ವಿರೋಧಿಸಿ, ಇದರಿಂದ ದೇಶದಲ್ಲಿ ಅಶಾಂತಿ ನೆಲೆಸುತ್ತದೆ ಎಂಬ ತೀರ್ಮಾನಕ್ಕೆ ಬಂದರು. ಸಾಮಾಜಿಕವಾಗಿ ಪ್ರತ್ಯೇಕಿಸಲ್ಪಟ್ಟ ಅಸ್ಪೃಶ್ಯರು, ಪ್ರತ್ಯೇಕ ಮತದಾನ ವ್ಯವಸ್ಥೆಯನ್ನು ಜಾರಿಗೆ ತಂದರೆ ರಾಜಕೀಯವಾಗಿಯೂ ದೂರವಾಗುತ್ತಾರೆ ಎಂದು ಭಯಪಟ್ಟಿದ್ದರು. ಅಲ್ಲದೆ ಅಂಬೇಡ್ಕರ್ ಬಯಸಿದ್ದ ಪ್ರತ್ಯೇಕ ಚುನಾವಣೆಯಿಂದ ಅಸ್ಪೃಶ್ಯರು ಇನ್ನುಳಿದ ಹಿಂದುಗಳಿಂದ ಮತ್ತಷ್ಟು ಹೆಚ್ಚಾಗಿ ಪ್ರತ್ಯೇಕಿಸಲ್ಪಡುತ್ತಾರೆ ಎಂಬುದು ಅವರವಾದ.[೭೮]

ಅಂತಿಮವಾಗಿ ದುಂಡು ಮೇಜಿನ ಸಮ್ಮೇಳನದಲ್ಲಿ ನೀಡಿದ ತೀರ್ಪು ಅಂಬೇಡ್ಕರ್ ಅವರ ಪರವಾಗುತ್ತದೆ. ಈ ತೀರ್ಪಿನ ವಿರುದ್ಧ ಗಾಂಧಿಯು ಅಮರಣಾಂತ ಉಪವಾಸವನ್ನು ಕೈಗೊಳ್ಳುತ್ತಾರೆ. ಇದರಿಂದ ಹೆದರಿದ ನಾಯಕರುಗಳು ಅಂಬೇಡ್ಕರ್ ಅವರ ಮನವೊಲಿಸಲು ಪ್ರಯತ್ನಿಸುತ್ತಾರೆ. ಆಗ ಅಂಬೇಡ್ಕರ್-

> "ಒಂದು ವಿಷಯವಂತೂ ತೀರ್ಮಾನವಾಗಿದೆ. ಗಾಂಧಿಯ ಪ್ರಾಣ ಉಳಿಸುವುದಕ್ಕಾಗಿ ನಾನು ನನ್ನ ಜನತೆಯ ಹಿತವನ್ನು ಬಲಿ ಕೊಡಲಾರೆ. ಈ ಹತ್ತಿರದ ದೀಪದ ಕಂಬಕ್ಕೆ ನನ್ನನ್ನು ನೀವು ನೇಣು ಹಾಕಿದರೂ ಸರಿಯೇ"

-ಎಂದು ಪ್ರತಿಕ್ರಿಯಿಸಿ ತಮ್ಮ ಜನತೆಯ ಹಿತದ ಕಡೆಗೆ ಒಲವು ತೋರುತ್ತಾರೆ.

ಅಂಬೇಡ್ಕರ್ ಮತ್ತು ಗಾಂಧಿ ಅವರ ಒಪ್ಪಂದವಾದ ಅನಂತರ ಗಾಂಧಿ ಅಸ್ಪೃಶ್ಯತೆಯ ನಿವಾರಣೆಗೆ ಸಂಪೂರ್ಣವಾಗಿ ತೊಡಗಿಸಿಕೊಂಡರು. ಅಲ್ಲದೆ ಅವರು ಭಾರತದಲ್ಲೆಲ್ಲಾ ಇದನ್ನು ಸಂಪೂರ್ಣವಾಗಿ ನಿವಾರಣೆ ಮಾಡುವುದಕ್ಕಾಗಿ ಸಂಚರಿಸುತ್ತಾರೆ. ಹಾಗೆಯೇ ಕರ್ನಾಟಕಕ್ಕೆ ೧೯೩೪ ಮತ್ತು ೧೯೩೬ ರಲ್ಲಿ ಬಂದು ಅಸ್ಪೃಶ್ಯತೆಯನ್ನು ನಿವಾರಿಸಲು ಪ್ರಯತ್ನಿಸಿದರು. ಅಲ್ಲದೇ ಅಸ್ಪೃಶ್ಯತೆಯನ್ನು ತೊಡೆದುಹಾಕಲು ಅವರನ್ನು ಹರಿಯ(ದೇವರ)ಮಕ್ಕಳೆಂದು, ಹರಿಜನರೆಂದು, ಹೆಸರಿಸಲಾಯಿತು.

ಹರಿಜನರ ಉದ್ಧಾರಕ್ಕಾಗಿ ಹಣ ಸಂಗ್ರಹಣೆ ಮಾಡಿದ್ದಷ್ಟೇ ಅಲ್ಲದೆ 'ಹರಿಜನ' ಎಂಬ ಪತ್ರಿಕೆಯನ್ನು ಹೊರಡಿಸಿದರು. 'ಹರಿಜನ ಸೇವಕ ಸಂಘ' ಮತ್ತು 'ಅಸ್ಪೃಶ್ಯತಾ ವಿರೋಧಿ ಸಂಘ'ಗಳಂಥ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿದರು. ಹರಿಜನರ ಕಲ್ಯಾಣಕ್ಕಾಗಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡ ಗಾಂಧಿ "ಮುಂದಿನ ಜನ್ಮದಲ್ಲಿ ತಾನು ಹುಟ್ಟಿದ್ದೇ ಆದರೆ ಅದು ಹರಿಜನನಾಗಿಯೇ" ಎಂಬ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದು ಉಂಟು

ಭಾರತವು ಸ್ವಾತಂತ್ರ್ಯವನ್ನು ಪಡೆದು ಅನಂತರ ಮೀಸಲಾತಿಗೆ ಸಂಬಂಧಿಸಿದಂತೆ ಅಧಿಸೂಚನೆಯನ್ನು ಹೊರಡಿಸಿತು. ಆ ಮೂಲಕ ಜಾತಿವ್ಯವಸ್ಥೆಯನ್ನು ಭಾರತದಲ್ಲಿ ತೊಡೆದು ಹಾಕಲು ಪ್ರಯತ್ನಿಸುವುದು ಇದರ ಉದ್ದೇಶ. ಆದರೆ ಅಷ್ಟು ಸುಲಭವಾಗಿ ಇದನ್ನು ತೊಡೆದು ಹಾಕಲು ಸಾಧ್ಯವಾಗುತ್ತಿಲ್ಲವೆಂದರೆ ಈ ಸಮಸ್ಯೆ ಎಷ್ಟು ಜಟಿಲ ಎಂಬುದು ತಿಳಿಯುತ್ತದೆ. ಏಕೆಂದರೆ ಪ್ರತಿಯೊಂದು ಜಾತಿಗಳು ತಮ್ಮ ಜಾತಿಗಳ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಪ್ರಬಲ ಆಗುತ್ತಿವೆ. ಅಲ್ಲದೆ ಅಂತರ್ಜಾತಿ ವಿವಾಹವಾದರೂ ಕೂಡ ಈ ಜಾತಿ ವ್ಯವಸ್ಥೆ ಬದಲಾಗುತ್ತಿಲ್ಲ. ಒಬ್ಬ ಹಿಂದೂ ಹುಡುಗ ಮುಸ್ಲಿಂ ಹುಡುಗಿಯನ್ನು ಅಥವಾ ಬ್ರಾಹ್ಮಣ ಹುಡುಗ ದಲಿತ ಹುಡುಗಿಯನ್ನು ಮದುವೆ ಮಾಡಿಕೊಂಡರೆ, ಹುಡುಗನ ಜಾತಿಗೆ ಸೇರ್ಪಡೆಯಾಗುತ್ತಾರೆ. ಆದ್ದರಿಂದಲೇ ಜಾತಿ ವ್ಯವಸ್ಥೆ ಬದಲಾಗುತ್ತಿಲ್ಲ. ಅಲ್ಲದೆ ಇಂದು ತಮ್ಮ ಜಾತಿಯವರನ್ನು ಬಿಟ್ಟು ಬೇರೆ ಜಾತಿಯವರನ್ನು ಮದುವೆ ಮಾಡಿಕೊಂಡು ಜೀವನ ನಡೆಸುವುದೇ ದುಸ್ತರ. ಏಕೆಂದರೆ ಸಂಪ್ರದಾಯವಾದಿ ತಂದೆ-ತಾಯಿಗಳ, ನೆಂಟರ ಬಹಿಷ್ಕಾರಕ್ಕೆ ಒಳಗಾಗುವುದೇ ಹೆಚ್ಚು. ಇದಕ್ಕೆ ಸರಿಯಾದ ಪರಿಹಾರಗಳನ್ನು ದೊರಕಿಸಿಕೊಡುವಲ್ಲಿ ಸರ್ಕಾರ ಆಲೋಚಿಸಬೇಕಾಗಿದೆ.

ಮೀಸಲಾತಿಗೆ ಸಂಬಂಧಿಸಿದಂತೆ ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ನಿಲುವುಗಳು ಒಂದೇ. ಇವರಿಬ್ಬರದು ಆಡಳಿತದಲ್ಲಿ ದಕ್ಷತೆ ಇರುವವರು ಇದ್ದರೆ ಮಾತ್ರ ದೇಶ ಅಭಿವೃದ್ಧಿ ಹೊಂದುತ್ತದೆ ಎಂಬವಾದ. ಆದರೆ ಆಡಳಿತದಲ್ಲಿ ಹಿಂದುಳಿದ ವರ್ಗಗಳಿಗೂ ಅವಕಾಶ ಕಲ್ಪಿಕೊಟ್ಟರೆ, ಅವರು ಸಹ ಅನುಭವದ ಮುಖೇನ ದಕ್ಷತೆಯನ್ನು ಹೊಂದುತ್ತಾರೆ ಎಂಬುದನ್ನು ಅರಿಯಬೇಕಾಗಿದೆ. ಯಾವುದೇ ವ್ಯಕ್ತಿ ಹುಟ್ಟಿದಾಕ್ಷಣ ಬುದ್ಧಿವಂತನಾಗಲೂ ಸಾಧ್ಯವೇ ಇಲ್ಲ. ಪ್ರತಿಯೊಬ್ಬರಿಗೂ ಪ್ರತಿಯೊಂದು

ಕ್ಷೇತ್ರದಲ್ಲೂ ಅವಕಾಶ ಕಲ್ಪಿಸಿಕೊಡಬೇಕು. ಆ ಮೂಲಕ ತರಬೇತಿ ನೀಡಿ ಅವರು ದಕ್ಷತೆಯಿಂದ ಆಡಳಿತವನ್ನು ನಿರ್ವಹಿಸಲು ಎಡೆಮಾಡಿಕೊಡಬೇಕಾಗುತ್ತದೆ.

ಮೀಸಲಾತಿಗೆ ಹೋರಾಟಗಳನ್ನು ಮಾಡದೆ ಅದರ ಸೌಲಭ್ಯಗಳನ್ನು ಪಡೆಯದೇ ಇದ್ದಲ್ಲಿ ಇಂದಿನ ಸಮಾಜವು ಇಷ್ಟರ ಮಟ್ಟಿಗೆ ಬದಲಾವಣೆ ಆಗುತ್ತಿರಲಿಲ್ಲವೇನೋ ಎಂಬ ಗುಮಾನಿಗಳು ಬಾರದೇ ಇಲ್ಲ. ಅಂದು ಪ್ರಬಲರಾಗಿದ್ದ ನಾಯಕರಲ್ಲಿ ಅನೇಕರು ಹಿಂದುಳಿದ ಮತ್ತು ಶೋಷಿತವರ್ಗಗಗಳಿಗೆ ಸರ್ಕಾರಿ ಹುದ್ದೆಗಳಲ್ಲಿ ಮತ್ತು ಶಿಕ್ಷಣದಲ್ಲಿ ಮೀಸಲಾತಿ ಕೊಡುವಂತೆ ಅಗ್ರಹ ಪಡಿಸಿದರು. ಆದ್ದರಿಂದಲೇ ದಲಿತ ಮತ್ತು ಹಿಂದುಳಿದ ವರ್ಗಗಳಿಗೆ ಉದ್ಯೋಗಾವಕಾಶಗಳು ಒದಗಿ ಬಂದದ್ದು. ಈ ಕುರಿತಂತೆ ಭಾರತವು ಸ್ವಾತಂತ್ರ್ಯವನ್ನು ಪಡೆದ ನಂತರ ಕೆಲವೊಂದು ಆಯೋಗಗಳನ್ನು ನೇಮಿಸಿತು. ಇದರ ಮೂಲಕವೂ ಮೀಸಲಾತಿಯನ್ನು ಕಲ್ಪಿಸಿಕೊಟ್ಟಿದ್ದು ಉಂಟು. ಆದರೂ ಸಹ ಅವುಗಳಿಂದ ಸಮರ್ಪಕವಾಗಿ ಕೆಲಸಗಳು ಆಗಿಲ್ಲ. ಅಲ್ಲದೆ ಈ ಆಯೋಗಗಳು ಸಮರ್ಪಕವಾದ ಪರಿಶೀಲನೆಯನ್ನು ಪ್ರತಿಯೊಂದು ಕ್ಷೇತ್ರಗಳಲ್ಲಿಯೂ ಮಾಡಿಲ್ಲ. ಹೀಗಾಗಿ ಹಿಂದುಳಿದ ವರ್ಗಗಳಿಗೆ ಸರಿಯಾದ ಸೌಲಭ್ಯಗಳು ದೊರೆಯುತ್ತಿಲ್ಲ.

ಜಾತಿಗಳಲ್ಲಿರುವ ಜಾತಿ-ಉಪಜಾತಿ, ಪಂಗಡ-ಉಪಪಂಗಡಗಳವರಿಗೆ ಮೀಸಲಾತಿಯ ಪೂರ್ಣ ಸೌಲಭ್ಯಗಳು ದೊರೆಯುತ್ತಿಲ್ಲ. ಈ ಕುರಿತ ಚರ್ಚೆಗಳು ಇಂದು ತೀವ್ರವಾಗುತ್ತಿವೆ. ಜಾತಿಗಳಲ್ಲಿನ ಪ್ರಧಾನ ಧಾರೆಗಳವರೇ ಹೆಚ್ಚಿನ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಇದರಿಂದ ಉಪಜಾತಿಗಳಿಗೆ ಯಾವುದೇ ಬಗೆಯ ಸೌಲಭ್ಯಗಳು ದೊರೆಯುತ್ತಿಲ್ಲ. ಇದಕ್ಕಾಗಿ ಒಳಜಾತಿಗಳ ಜನಸಂಖ್ಯೆಯನ್ನಾಧರಿಸಿ ಮೀಸಲಾತಿಯನ್ನು ಕಲ್ಪಿಸಿಕೊಟ್ಟರೆ, ಅವು ಪ್ರಬಲ ಜಾತಿಗಳೊಂದಿಗೆ ಸ್ಪರ್ಧಿಸಲು ಸಾಧ್ಯವಾಗುತ್ತದೆ ಎಂಬ ವಿಚಾರಧಾರೆ ಇಂದು ಚಾಲ್ತಿಗೆ ಬರುತ್ತಿದೆ.

ದಲಿತರಲ್ಲೇ ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡ ಹಾಗೂ ಉಪಪಂಗಡಗಳು ಎಂದು ಗುರುತಿಸಲ್ಪಟ್ಟು ಸ್ಪರ್ಧೆ ಏರ್ಪಟ್ಟಿದೆ, ಅದರಲ್ಲೂ ಹೊಲೆಯ-ಮಾದಿಗ ಎಂಬ ಪ್ರತ್ಯೇಕತೆಗಳು ಕಂಡುಬರುತ್ತಿವೆ. ಮಾದಿಗ ಜನಾಂಗವು ಹೊಲೆಯ ಜನಾಂಗದಿಂದ ನಮಗೆ ಹೆಚ್ಚು ಸೌಲಭ್ಯ ದೊರೆಯುತ್ತಿಲ್ಲವಾದ್ದರಿಂದ ನಮಗೆ ಪ್ರತ್ಯೇಕ ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿಕೊಡಿ ಎಂದು ಹೋರಾಡುತ್ತಿದೆ. ಈ ಎರಡು ಜಾತಿಗಳ ಜನಸಂಖ್ಯೆ ಮತ್ತು ಉದ್ಯೋಗದಲ್ಲಿರುವ ಮಾಹಿತಿಯನ್ನು ಪರಿಶೀಲಿಸಬೇಕು. ತದನಂತರ ಯಾವ ಜನಾಂಗಕ್ಕೆ ಅನ್ಯಾಯವಾಗಿದೆ, ಅವರಿಗೆ ಮೀಸಲಾತಿಯನ್ನು ಎಷ್ಟು ಕಲ್ಪಿಸಿಕೊಂಡಬೇಕೆಂದು ತೀರ್ಮಾನ ಮಾಡಬೇಕಾಗಿದೆ. ಮೀಸಲಾತಿಯನ್ನು ಹಿಂದುಳಿದ ವರ್ಗಗಳಿಗೆ ಯಾವುದೇ ತಾರತಮ್ಯವಿಲ್ಲದೆ, ಅವುಗಳ ಜನಸಂಖ್ಯೆಗೆ ಅನುಗುಣವಾಗಿ ಕಲ್ಪಿಸಿಕೊಡಬೇಕು ಎಂಬ ಹೋರಾಟಗಳು ಮತ್ತು

ಚಿಂತನೆಗಳು ನಡೆದಿವೆ. ಆಗ ಮಾತ್ರ ಈ ಜನಾಂಗಗಳವರು ಮುಂದುವರೆಯಲು ಸಾಧ್ಯ. ಅಲ್ಲದೆ ಈ ಮೀಸಲಾತಿಯಿಂದ ಶೈಕ್ಷಣಿಕವಾಗಿ ಆರ್ಥಿಕವಾಗಿ, ರಾಜಕೀಯವಾಗಿ ಪ್ರಬಲರಾಗಲು ಸಾಧ್ಯವಾಗುತ್ತದೆ.

ಹಿಂದುಳಿದ ವರ್ಗದವರಲ್ಲಿಯೂ ಮುಂದುವರಿದ ಜನರು ಇದ್ದಾರೆ. ಅವರು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಪ್ರಬಲರಾಗಿದ್ದಾರೆ. ಇಂಥವರಿಗೆ ಮೀಸಲಾತಿಯನ್ನು ನಿಲ್ಲಿಸಬಹುದು. ಅಲ್ಲದೇ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ಕಡು ಬಡತನದಲ್ಲಿ ಬದುಕುತ್ತಿರುವವರನ್ನು ಗುರುತಿಸಬೇಕು. ಆಗ ಮಾತ್ರ ಈ ಜನರಿಗೆ ಹೆಚ್ಚಿನ ಮೀಸಲಾತಿಯ ಸೌಲಭ್ಯವನ್ನು ಒದಗಿಸಿಕೊಡಲು ಸಾಧ್ಯ. ಇದರಿಂದ ಅವರು ಸಹ ಪ್ರತಿಯೊಂದು ಕ್ಷೇತ್ರದಲ್ಲೂ, ಮುಂದುವರೆದ ಜನರೊಡನೆ ಸ್ಪರ್ಧಿಸಲು ಸಾಧ್ಯವಾಗುತ್ತದೆ. ಆಗ ಮಾತ್ರ ಸಮಾಜದಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿಕೊಟ್ಟಂತಾಗುತ್ತದೆ. ಇದರಿಂದ ಯಾವುದೇ ತಾರತಮ್ಯಗಳು ಇರುವುದಿಲ್ಲ.

ಭಾರತವು ಒಂದು ವಿಶಾಲವಾದ ದೇಶವಾಗಿ ವೈವಿಧ್ಯತೆಗಳಿಂದ ಕೂಡಿದೆ. ಪುರಾತನ ಕಾಲದಿಂದಲೂ ಭಾರತವು ಪ್ರಧಾನವಾಗಿ ಕೃಷಿ ಆಧಾರಿತ ದೇಶವಾಗಿರುವಂತೆಯೇ, ಜಾತಿ ಆಧಾರಿತ ದೇಶವೂ ಆಗಿದೆ. ಇಂದಿಗೂ ಸಹ ನಾವು ಜಾತಿವ್ಯವಸ್ಥೆಯನ್ನು ಪ್ರಬಲವಾಗಿ ಹೊಂದಿರುವುದನ್ನು ಕಾಣಬಹುದು. ಹಿಂದೆ ಜಾತಿವ್ಯವಸ್ಥೆಯು ಪ್ರಮುಖವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಎಂಬ ಘಟಕಗಳಲ್ಲಿ ವಿಂಗಡಿತವಾಗಿತ್ತು. ಇಂದಿಗೂ ಆ ಲಕ್ಷಣಗಳನ್ನು ಕಾಣಲು ಸಾಧ್ಯ. ಪ್ರತಿಯೊಂದು ಜಾತಿಯೂ ತಮ್ಮ ಜಾತಿಗೆ ಅನುಗುಣವಾಗಿ ಸಂಘಸಂಸ್ಥೆಗಳನ್ನು ಸ್ಥಾಪಿಸಿಕೊಂಡು ತಮ್ಮ ಜನರ ಪ್ರಗತಿಯನ್ನು ಸಾಧಿಸಲು ಹೆಣಗುತ್ತಿವೆ.

ಭಾರತದ ಜಾತಿವ್ಯವಸ್ಥೆಗೆ ಸಂಬಂಧಿಸಿದಂತೆ ಲಾಲಾ ಹರದಯಾಳ್ ಅವರು ವ್ಯಕ್ತಪಡಿಸಿರುವ ಹೇಳಿಕೆ ಇಂದಿಗೂ ಎಷ್ಟು ಪ್ರಸ್ತುತವೆಂದರೆ-

> "ಜಾತಿ ವ್ಯವಸ್ಥೆ ಭಾರತಕ್ಕೆ ಒಂದು ಶಾಪವಾಗಿದೆ. ಹಿಂದುಸ್ಥಾನದ ನಾಶವನ್ನು, ಮುಸಲ್ಮಾನ ಧರ್ಮ ಮಾಡಿಲ್ಲ, ಇಂಗ್ಲೇಂಡ್ ಕೊಡಮಾಡಿಲ್ಲ ನಮ್ಮ ಶತ್ರುವಿನ ನಿವಾಸ ನಮ್ಮೊಳಗೇ ಇದೆ. ಪುರೋಹಿತಶಾಹಿ ಮತ್ತು ಜಾತಿ ಬೇಧಗಳು ನಮ್ಮನ್ನು ನಾಶ ಮಾಡಿವೆ"[೨೪]

-ಎಂದು ಹೇಳುವಷ್ಟರ ಮಟ್ಟಿಗೆ.

ಲಾಲಾಹರದಯಾಳ್‌ರಂತೆ ಎಸ್.ವಿ.ಕೇಟ್ಕರ್ ಅವರು ಸಹ ನಮ್ಮ ಜಾತಿ ವ್ಯವಸ್ಥೆಯನ್ನು ಖಂಡಿಸಿದ್ದಾರೆ. ಅಲ್ಲದೇ ಅವರು-

> "ಭಾರತದಲ್ಲಿ ಜಾತಿಗಳು ಎಲ್ಲಿಯ ತನಕ ಇರುವವೋ, ಅಲ್ಲಿಯತನಕ ಹಿಂದುಗಳು ಅಂತರ್ಜಾತಿಯ ವಿವಾಹವನ್ನು ಒಪ್ಪಲಾರರು. ಹಿಂದೂಗಳು ಈ ಭೂಮಿಯ ಇತರ ಭಾಗಗಳಿಗೆ ವಲಸೆ ಹೋದಲ್ಲಿ, ಜಾತಿಯೆಂಬುದು ಜಗತ್ತಿನ ಸಮಸ್ಯೆಯಾಗಿ ಬಿಡುತ್ತದೆ"[೨೫]

-ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಮಾತುಗಳಿಂದ ಭಾರತದಲ್ಲಿ ಜಾತಿ ವ್ಯವಸ್ಥೆಯು ಎಷ್ಟು ಪ್ರಬಲವಾಗಿದೆ. ಹಾಗೂ ಅವುಗಳಿಂದ ಎಂತಹ ಪರಿಣಾಮಗಳುಂಟಾಗುತ್ತವೆ ಎಂಬುದನ್ನು ಚಿಂತಿಸಲು ಸಹಕಾರಿ ಆಗಿದೆ.

**ಟಿಪ್ಪಣಿಗಳು**

೧. ನಾರಾಯಣರಾವ್.ವಿ.ಎಸ್., (೧೯೭೮), ಮೋಕ್ಷಗುಂಡಂ ವಿಶ್ವೇಶ್ವರಯ್ಯ ಪು. ೨೯೩

೨. ಚಂದ್ರಶೇಖರ್.ಎಸ್.,(೧೯೯೨), ಅಂಬೇಡ್ಕರ್ ಮತ್ತು ಗಾಂಧಿ, ಪು. ೧

೩. ಚಂದ್ರಶೇಖರ್.ಎಸ್., (೧೯೯೨), ಅದೇ, ಪು. ೧

೪. ಯಾಮುನಾಚಾರ್ಯ.ಎಂ.,(೧೯೬೨), ಭಾಷಣಗಳು ಮತ್ತು ಹೇಳಿಕೆಗಳು, ಪು. ೨೭೦

೫. ಯಾಮುನಾಚಾರ್ಯ ಎಂ., (೧೯೬೨), ಅದೇ, ೨೯.೫.೨೪., ಯಂಗ್ ಇಂಡಿಯಾ, ಪು.೨೯೮-೨೯೯

೬. ಯಾಮುನಾಚಾರ್ಯ ಎಂ.,(೧೯೬೨), ಅದೇ, ೧೯.೧೧.೩೦, ಯಂಗ್ ಇಂಡಿಯಾ ಪು. ೨೯೯

೭. ಜಯಪ್ಪಗೌಡ ಡಿ.ಎಸ್.,(೧೯೯೪), ದಿವಾನ್.ಸರ್.ಎಂ.ವಿಶ್ವೇಶ್ವಯ್ಯನವರ ಕಾರ್ಯಸಾಧನೆಗಳು, ಪು. ೩೭

೮. ಜಯಪ್ಪಗೌಡ ಡಿ.ಎಸ್.,(೧೯೯೪), ಅದೇ, ಪು. ೪೬

೯. ಜಯಪ್ಪಗೌಡ ಡಿ.ಎಸ್.,(೧೯೯೪) ಅದೇ, ಪು. ೪೭

೧೦. ಜಯಪ್ಪಗೌಡ, ಡಿ.ಎಸ್.(೧೯೯೪), ಅದೇ, ಪು. ೨೬೫

೧೧. ರಾಮಯ್ಯ ಪಿ.ಆರ್.,(೧೯೯೯), ದಯಾಸಾಗರ ಎಂ.ವೆಂಕಟಕೃಷ್ಣಯ್ಯ ಜೀವನ ಮತ್ತು ಸಾಧನೆ ಪು. ೭೩

೧೨. ಜಯಪ್ಪಗೌಡ ಡಿ.ಎಸ್.,(೧೯೯೪), ಅದೇ, ಪು. ೨೬೫

೧೩. ಚಂದ್ರಶೇಖರ್ ಎಸ್.,(೧೯೮೩), ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ,..ಪು. ೪೭

೧೪. ಜಯಪ್ಪಗೌಡ ಡಿ.ಎಸ್.,(೧೯೯೪), ಅದೇ, ಪು. ೩೦೯

೧೫. ಜಯಪ್ಪಗೌಡ ಡಿ.ಎಸ್.,(೧೯೯೪), ಅದೇ, ಪು. ೩೧೨

೧೬. ಗುಂಡಪ್ಪ ಡಿ.ವಿ.,(೧೯೭೧), ಮೈಸೂರಿನ ದಿವಾನರುಗಳು ಸ್ವಾತಂತ್ರ್ಯ ಪೂರ್ವದ ಆರುದಶಕಗಳು, ಪು. ೧೬೦-೧೬೧

೧೭. ಚಂದ್ರಶೇಖರ್ ಎಸ್.,(೧೯೯೨), ಅಂಬೇಡ್ಕರ್ ಮತ್ತು ಗಾಂಧಿ, ಪು. ೨

೧೮. ಜಯಪ್ಪಗೌಡ ಡಿ.ಎಸ್.,(೧೯೯೫), ಅದೇ, ಪು. ೧೧೧

೧೯. ಜಯಪ್ಪಗೌಡ ಡಿ.ಎಸ್.,(೧೯೯೫) ಅದೇ, ಪು. ೨೮೨

೨೦. ನಾರಾಯಣರಾವ್ ವಿ.ಎಸ್.,(೧೯೫೨), ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಪು. ೧೧೫

೨೧. ಗೊರೂರುರಾಮಸ್ವಾಮಿ ಅಯ್ಯಂಗಾರ್ (ಭಾ), (೧೯೯೫), ಆತ್ಮಕಥೆ ಮತ್ತು ನನ್ನ ಸತ್ಯಾನ್ವೇಷಣೆ ಪು. ೪೨೨

೨೨. ಚಂದ್ರಶೇಖರ್ ಎಸ್., (೧೯೯೨), ಅಂಬೇಡ್ಕರ್ ಮತ್ತು ಗಾಂಧಿ, ಪು.೭-೮

೨೩. ಚಂದ್ರಶೇಖರ್ ಎಸ್., (೧೯೯೨) ಅದೇ, ಪು.೧೮

೨೪. ಅರವಿಂದ ಮಾಲಗತ್ತಿ, (೧೯೯೧), ಡಾ.ಅಂಬೇಡ್ಕರ್ ವಿಚಾರಧಾರೆ, ಪು. ೧೫೩

೨೫. ಅರವಿಂದ ಮಾಲಗತ್ತಿ, (೧೯೯೧), ಅದೇ, ಪು. ೧೨೭

# ಅಧ್ಯಾಯ- ೫

# ರಾಜಕಾರಣವನ್ನು ಕುರಿತ ಚಿಂತನೆಗಳು

೫.೧. ರಾಷ್ಟ್ರ-ರಾಷ್ಟ್ರೀಯತೆ

೫.೨. ದಾಸ್ಯ-ಸ್ವಾತಂತ್ರ್ಯ

೫.೩. ರಾಷ್ಟ್ರ-ರಕ್ಷಣೆ

## ೫.೧. ರಾಷ್ಟ್ರ-ರಾಷ್ಟ್ರೀಯತೆ

ರಾಷ್ಟ್ರ-ರಾಷ್ಟ್ರೀಯತೆ ಎಂಬ ಪರಿಕಲ್ಪನೆಗೆ ನಿರ್ಧಿಷ್ಟವಾದ ಅರ್ಥ ಕೊಡುವುದು ಕಷ್ಟ ಸಾಧ್ಯ. ಹೀಗಾಗಿ ಭೌಗೋಳಿಕವಾಗಿ ತನ್ನದೇ ಆದ ವ್ಯಾಪ್ತಿಯನ್ನು ಹೊಂದಿದ್ದು, ವಿವಿಧ ಜನ ಸಮುದಾಯಗಳು ಒಂದೆಡೆ ಸೇರಿ, ಒಂದೇ ರಾಷ್ಟ್ರಧ್ವಜದ ಅಡಿಯಲ್ಲಿ ತಮ್ಮ ಭಾಷೆ, ಸಂಪ್ರದಾಯಗಳಿಂದ ಗುರುತಿಸಿಕೊಳ್ಳುವುದು ಮತ್ತು ಈ ಎಲ್ಲಾ ಸಮಸ್ತ ಪ್ರಜೆಗಳಿಗೂ ಒಂದೇ ಕೇಂದ್ರಾಡಳಿತ ಘಟಕದಿಂದ ನಿರ್ವಹಿಸುವ ಆಡಳಿತ ಪ್ರಾಂತ್ಯವೇ 'ರಾಷ್ಟ್ರ' ಎನ್ನಬಹುದು.

ರಾಷ್ಟ್ರೀಯತೆಯ ಪರಿಕಲ್ಪನೆಯು ವಿಶಾಲವಾದದ್ದು. ಇದರಿಂದ ಯಾವುದೇ ಅಪಾಯವಿರುವುದಿಲ್ಲ. ಆದರೆ ಸಂಕುಚಿತೆಯಿಂದ ಕೂಡಿದ್ದರೆ ಮಾತ್ರ ಆಪಾಯವನ್ನು ತಂದೊಡ್ಡುತ್ತದೆ. ಜಪಾನ್ ತಾನು ಇತರರಿಗಿಂತ ಶ್ರೇಷ್ಠವೆಂದು, ತಮ್ಮ ಸಂಸ್ಕೃತಿ, ಧರ್ಮ, ರೂಢಿ ಸಂಪ್ರದಾಯಗಳು ಶ್ರೇಷ್ಠವೆಂದುಕೊಂಡು ಚೀನಾದ ಮೇಲೆ ಆಕ್ರಮಣ ಮಾಡಿ ವಶಪಡಿಸಿಕೊಂಡಿತ್ತು. ಅದರಂತೆ ಇಂಗ್ಲೆಂಡ್ ಸಹ ಭಾರತವನ್ನು ವಶಪಡಿಸಿಕೊಂಡಿತ್ತು.

ರಾಷ್ಟ್ರೀಯತೆ ಭಾವನೆಯು ವಿಶಾಲವಾಗಿರಬೇಕು. ಯಾವುದೇ ಒಂದು ರಾಷ್ಟ್ರದಲ್ಲಿ ವಾಸಿಸುವ ವಿವಿಧ ಜನ ಸಮುದಾಯ, ವಿವಿಧ ಭಾಷೆಯಗಳನ್ನಾಡುವ ಪ್ರಜೆಗಳು, ವಿವಿಧ ಸಂಸ್ಕೃತಿ ಸಂಪ್ರದಾಯ, ರೂಢಿ ಪದ್ಧತಿಯನ್ನು ಹೊಂದಿದ್ದರೂ ಸಹ, ನಾವೆಲ್ಲರೂ ಒಂದೇ ಎಂಬ ಮನೋಭಾವನೆಯನ್ನು, ಮಾನಸಿಕವಾಗಿ ಮತ್ತು ಭೌದ್ಧಿಕವಾಗಿ ವ್ಯಕ್ತಪಡಿಸುವುದೇ 'ರಾಷ್ಟ್ರೀಯತೆ' ಎಂದು ಕರೆಯುಬಹುದು. ಭಾರತದಲ್ಲಿ ಈ ರಾಷ್ಟ್ರೀಯತೆಯ ಪ್ರಜ್ಞೆಯು ತಿಲಕ್ ಚಿಂತನೆಗಳಿಂದ ಮೂಡಿದುದರ ಬಗ್ಗೆ ಸಿ.ಆರ್.ಗೋವಿಂದರಾಜು ಅವರು-

> "ರಾಷ್ಟ್ರೀಯತೆಯ ಪ್ರಜ್ಞೆ ಹೆಚ್ಚು ಜನರನ್ನು ಆವರಿಸುತ್ತಿದ್ದು ತನ್ನ 'ಹಿಂದುತ್ವದ ಪ್ರಜ್ಞೆ' ಯಿಂದಲೇ ಎಂಬುದನ್ನು ಮರೆಯುವಂತಿಲ್ಲ"

-ಎಂದಿದ್ದಾರೆ.[೧]

ಭಾರತದಲ್ಲಿ ಈ ರಾಷ್ಟ್ರೀಯತೆ ಎಂಬ ಕಲ್ಪನೆಯು ೧೯ ಮತ್ತು ೨೦ನೆಯ ಶತಮಾನದಲ್ಲಿ ಚಿಗುರತೊಡಗಿತು. ಇದಕ್ಕಿಂತ ಹಿಂದೆ ಭಾರತವು ಒಂದು ಒಕ್ಕೂಟ ರಾಷ್ಟ್ರವಾಗಿರಲಿಲ್ಲ. ಅದು

ಹಲವಾರು ಗಣರಾಜ್ಯಗಳಾಗಿ, ಅನೇಕ ರಾಜರುಗಳು ಆಳ್ವಿಕೆಯನ್ನು ನಡೆಸುತ್ತಿದ್ದರು. ಇಂಥ ಸಮಯದಲ್ಲೇ ವ್ಯಾಪಾರಕ್ಕಾಗಿ ಯುರೋಪಿಯನ್ನರು ಭಾರತಕ್ಕೆ ಬಂದರು. ಅವರಲ್ಲಿ ಪ್ರಮುಖರಾದವರೇ ಆಂಗ್ಲರು. ಅವರು ಅಂದಿನ ಭಾರತದ ಪರಿಸ್ಥಿತಿಯನ್ನು ಅರಿತುಕೊಂಡು, ತದನಂತರ ತಮ್ಮ ಬುದ್ಧಿವಂತಿಕೆ, ಮಿಲಿಟರಿ ಸಹಾಯ ಮತ್ತು ಒಡೆದು ಆಳುವ ನೀತಿಯನ್ನುಸರಿಸಿ ಒಂದೊಂದು ಪ್ರಾಂತ್ಯವನ್ನೂ ಗೆದ್ದುಕೊಂಡರು. ನಂತರ ಇಡೀ ಭಾರತವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡರು.

ವಿಶಾಲವಾದ ಭಾರತವನ್ನು ಆಂಗ್ಲರು ಒಂದೇ ಆಡಳಿತ ಘಟಕವನ್ನಾಗಿ ನಿರ್ಮಾಣ ಮಾಡಿಕೊಂಡು ಆಡಳಿತ ನಡೆಸಲು ಪ್ರಯತ್ನಿಸಿದವರು. ಹೀಗಾಗಿ ಒಂದೇ ಕಾನೂನು ಜಾರಿಗೆ ಬಂದಿತು. ಆಡಳಿತವನ್ನು ನಿರ್ವಹಿಸುವುದಕ್ಕಾಗಿ ಕೆಲವೊಂದು ಸೌಲಭ್ಯವನ್ನು ಕಲ್ಪಿಸಿಕೊಂಡರು. ಇದಲ್ಲದೆ ದೇಶದಲ್ಲಿ ಶಾಂತಿ ರೀತಿಯಲ್ಲಿ ಆಳ್ವಿಕೆ ನಡೆಸುವುದಕ್ಕಾಗಿ ಮತ್ತು ಸಂಪತ್ತು ದೋಚುವುದಕ್ಕಾಗಿ ರೈಲು ಸಂಪರ್ಕಗಳು ನಿರ್ಮಾಣ ಆದವು. ಆದರೆ ಇದರಿಂದಾಗಿ ಭಾರತೀಯರಿಗೆ ರಾಜಕೀಯ ಐಕ್ಯತೆ ಮೂಡಲು ಕಾರಣವಾಯಿತು.

ಆಂಗ್ಲರು ತಮ್ಮ ಅನುಕೂಲಕ್ಕೆ ತಕ್ಕಂತೆ ಆಡಳಿತವನ್ನು ನಡೆಸುವುದಕ್ಕಾಗಿ, ಭಾರತದಲ್ಲಿ ಆಧುನಿಕ ಶೈಕ್ಷಣಿಕ ಪದ್ಧತಿಯನ್ನು ಜಾರಿಗೆ ತಂದರು. ಅಲ್ಲದೆ ಭಾರತದಲ್ಲಿ ಕೆಲವೊಂದು ಐತಿಹಾಸಿಕ ಸ್ಥಳಗಳ ಸಂಶೋಧನಾ ಕಾರ್ಯ, ಮತ್ತು ಪ್ರತಿಕೋದ್ಯಮ ವ್ಯವಸ್ಥೆಯನ್ನು ಅಳವಡಿಸಿದರು. ಆಂಗ್ಲ ಶಿಕ್ಷಣವನ್ನು ಪಡೆದ ಭಾರತೀಯರಿಗೆ ಪತ್ರಿಕೆಗಳ ಮೂಲಕ ಯುರೋಪಿಯನ್ನರ ವಿಚಾರಧಾರೆಗಳನ್ನು ತಿಳಿದುಕೊಳ್ಳಲು ಸಹಾಯವಾಯಿತು. ಇದೇ ಸಮಯದಲ್ಲೇ ಯುರೋಪಿನಲ್ಲಿಯೂ ಸ್ವಾತಂತ್ರ್ಯ ಚಳುವಳಿಯು ನಡೆಯುತ್ತಿತ್ತು. ಇದಕ್ಕಿಂತ ಮುಖ್ಯವಾಗಿ ಯುರೋಪಿನ ಬುದ್ಧಿ ಜೀವಿಗಳೆನಿಸಿದ ರೂಸೋ, ಮೆಕಾಲೆ, ಮಿಲ್, ವಾಲ್ಟೇರ್ ಇನ್ನು ಮುಂತಾದವರ ವಿಚಾರಧಾರೆಗಳನ್ನು ತಿಳಿದುಕೊಂಡರು. ಇದರಿಂದಾಗಿ ರಾಜಕಾರಣದ ಅರಿವು ಭಾರತೀಯರಿಗೆ ಮೂಡಿತು. ಅಲ್ಲದೆ ಆಂಗ್ಲರು ಅನುಸರಿಸಿದ ಜನಾಂಗೀಯ ಭೇದವು ಭಾರತೀಯರನ್ನು ಒಂದು ಗೂಡಿಸಲು ಸಹಕಾರಿ ಆಯಿತು. ಈ ಹಿನ್ನೆಲೆಗಳಲ್ಲಿ ಭಾರತೀಯರಲ್ಲಿ ರಾಷ್ಟ್ರೀಯತೆಯ ಭಾವನೆಯು ಮೂಡಲು ಸಾಧ್ಯ ಆಗುತ್ತಾ ಹೋಯಿತು.

ಆಂಗ್ಲ ಶಿಕ್ಷಣ ಪಡೆದ ಭಾರತೀಯರು ಆಂಗ್ಲರ ದೌರ್ಜನ್ಯವನ್ನು ಅರಿತು, ಅವರ ವಿರುದ್ಧವಾಗಿ ಸ್ವಾತಂತ್ರ್ಯ ಪಡೆಯಲು ಸಂಘಟಿತರಾಗತೊಡಗಿದರು. ಅವರುಗಳಲ್ಲಿ ಪ್ರಮುಖವಾಗಿ ದಾದಾಬಾಯಿ ನವರೋಜಿ, ಸುರೇಂದ್ರನಾಥ ಬ್ಯಾನರ್ಜಿ, ಅರವಿಂದ ಘೋಷ್, ಲಾಲಾ ಲಜಪತ್ ರಾಯ್, ತಿಲಕ್, ಗೋಖಲೆ ಇನ್ನು ಪ್ರಮುಖರು. ಇವರುಗಳ ಶ್ರಮದಿಂದ ೧೮೮೫ ರಲ್ಲಿ 'ಭಾರತೀಯ ರಾಷ್ಟ್ರೀಯ ಕಾಂಗ್ರೇಸ್' ಸ್ಥಾಪನೆಯಾಯಿತು. ಇದರ ಮೂಲ ಉದ್ದೇಶ ಆಂಗ್ಲರ ದಾಸ್ಯದಿಂದ ಭಾರತೀಯರನ್ನು ಬಿಡಿಸುವುದಾಗಿತ್ತು. ಈ ಸಂಸ್ಥೆಯ ಮೂಲಕ ಸ್ವಾತಂತ್ರ್ಯ ಪಡೆಯಲು ಹೋರಾಟವನ್ನು ಭಾರತೀಯರು

ಆರಂಭಿಸಿದ್ದರು. ಹೀಗೆ ಭಾರತೀಯರಲ್ಲಿ ರಾಷ್ಟ್ರ-ರಾಷ್ಟ್ರೀಯತೆಯ ಪರಿಕಲ್ಪನೆಯು ಹಂತ ಹಂತವಾಗಿ ಹುಟ್ಟಿಕೊಂಡಿತು. ಈ ಹಿನ್ನೆಲೆಯಲ್ಲಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು 'ರಾಷ್ಟ್ರ-ರಾಷ್ಟ್ರೀಯತೆ' ಎಂಬ ಪರಿಕಲ್ಪನೆಗೆ ಚಿಂತಿಸಿದ ಚಿಂತನೆಗಳು ಮತ್ತು ಕಾರ್ಯಗಳನ್ನು ಚರ್ಚಿಸುವುದು ಸೂಕ್ತವಾಗಿದೆ.

ಗಾಂಧಿ ಅವರು ರಾಷ್ಟ್ರ ಮತ್ತು ರಾಷ್ಟ್ರೀಯತೆಯ ಬಗ್ಗೆ ದೇಶಿಯ ನೆಲೆಯಿಂದ ಚಿಂತಿಸಿದವರು. ಇವರ ರಾಷ್ಟ್ರದ ಪರಿಕಲ್ಪನೆಯಲ್ಲಿ ಭಾರತವು "ರಾಮರಾಜ್ಯ"ವಾಗಬೇಕೆಂಬ ನಿಲುವು. ಅಲ್ಲಿ ತಮ್ಮ ರಾಷ್ಟ್ರದ ಜನರಿಗೆ ಎಲ್ಲ ರೀತಿಯ ಸೌಲಭ್ಯ ಸವಲತ್ತುಗಳಿರುತ್ತವೆ. ಎಲ್ಲರೂ ಸಮಾನರು, ಎಲ್ಲರೂ ಸುಖದಿಂದ ಬಾಳುವಂತೆ ನೋಡಿಕೊಳ್ಳುವುದು ಎಂದು 'ರಾಮರಾಜ್ಯ'ದ ಕಲ್ಪನೆಯನ್ನಿಟ್ಟುಕೊಂಡಿದ್ದರು.

ಗಾಂಧಿ ಅವರು 'ಆಂಗ್ಲರು ಭಾರತಕ್ಕೆ ಬರುವ ಮುನ್ನ ಅದು ರಾಷ್ಟ್ರವಾಗಿರಲಿಲ್ಲ, ಹಾಗೂ ರಾಷ್ಟ್ರೀಯತೆಯ ಭಾವನೆಯು ಶತಮಾನಗಳ ನಂತರ ರೂಢಿಗೆ ಬಂದದ್ದು' ಎಂಬುದನ್ನು ವಿರೋಧಿಸುತ್ತಿದ್ದುದುಂಟು. ಅಲ್ಲದೆ ಆಂಗ್ಲರು ಭಾರತಕ್ಕೆ ಬರುವುದಕ್ಕೆ ಮೊದಲೇ ಒಂದು ರಾಷ್ಟ್ರವಾಗಿತ್ತು. ಆದ್ದರಿಂದಲೆ ಅವರು ಆಳ್ವಿಕೆ ನಡೆಸಲು ಸಾಧ್ಯವಾಯಿತು. ಅಂದು ನಮ್ಮ ಜನರ ವಿಚಾರಧಾರೆಗಳು, ಬದುಕು-ಬಾಳು-ಸಮಾಜ ಒಂದೇ ರೀತಿಯಲ್ಲಿತ್ತು. ಭಾರತದಲ್ಲಿದ್ದ ಹಿಂದೂ-ಮುಸ್ಲಿಂ-ಸಿಖ್ ಎಲ್ಲರೂ ಯಾವ ಭೇದ-ಭಾವನೆಯಿಲ್ಲದೆ ಜೀವನ ನಡೆಸುತ್ತಿದ್ದರು. ಆದರೆ ಆಂಗ್ಲರು ಭಾರತಕ್ಕೆ ಬಂದು ಇಲ್ಲಿನ ಜನರಲ್ಲಿ ಭೇದ-ಭಾವನೆಯ ಬೀಜವನ್ನು ಬಿತ್ತಿದರು. ಆದ್ದರಿಂದಲೇ ಅವರಿಗೆ ಆಳ್ವಿಕೆ ನಡೆಸಲು ಸುಲಭ ಸಾಧ್ಯವಾಯಿತು ಎಂಬ ನಿಲುವನ್ನು ವ್ಯಕ್ತಪಡಿಸುತ್ತಿದ್ದರು.

ಗಾಂಧಿಯವರು ಈ ರಾಷ್ಟ್ರೀಯತೆ ಪರಿಕಲ್ಪನೆಯ ಬಗ್ಗೆ ವಿಶಾಲವಾದ ದೃಷ್ಟಿಕೋನದಿಂದ ಆಲೋಚಿಸಿದವರು. ಅವರು ಎಂದೂ  ಬಲಪ್ರಯೋಗಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಬದಲಾಗಿ ಅಹಿಂಸೆಯ ತತ್ತ್ವವನ್ನು ಪಾಲಿಸುವಂತೆ ಕರೆ ನೀಡುತ್ತಿದ್ದುದುಂಟು. "ದ್ವೇಷದಿಂದ ದ್ವೇಷ ಹೆಚ್ಚುತ್ತದೆ, ಅದಕ್ಕೆ ಬದಲಾಗಿ ದ್ವೇಷವನ್ನು ಪ್ರೀತಿಯಿಂದ ಗೆಲ್ಲಬೇಕು" ಎಂದು ಹೇಳಿದ್ದ ಬುದ್ಧನ ತತ್ತ್ವವನ್ನು ಪಾಲಿಸಿದವರು. ಇವರು ಪ್ರಮುಖವಾಗಿ ಮಾನವ ಜನಾಂಗವು ಹಿಂಸೆಯಿಂದ ಸಾಯುವುದನ್ನು ಇಷ್ಟಪಡುತ್ತಿರಲಿಲ್ಲ. ಹೀಗಾಗಿ ಅಹಿಂಸೆಯ ತತ್ವದಿಂದ ಇಡೀ ಮಾನವನ ಜನಾಂಗವು ನಾಶವಾದರೂ ಸರಿಯೇ, ಹಿಂಸೆಯನ್ನು ಭಾರತವು ಮಾಡಬಾರದು ಎಂದು ಆಶಿಸುತ್ತಿದ್ದರು.

ಗಾಂಧಿ ಅವರ ಪ್ರಕಾರ ರಾಷ್ಟ್ರೀಯತೆ ಎಂದರೆ-

> ನನಗೆ ರಾಷ್ಟ್ರೀಯತೆ ಮಾನವೀಯತೆ ಇವೆರಡೂ ಒಂದೇ. ನಾನು ಮಾನವ ವರ್ಗಕ್ಕೆ ಸೇರಿ, ಕರುಣೆಯಿಂದಲೂ ಕೂಡಿರುವುದರಿಂದ ನಾನು 'ರಾಷ್ಟ್ರೀಯ'ನಾಗಿದ್ದೇನೆ. ಇದೇನು ಪ್ರತ್ಯೇಕಿಸುವ ವಿಷಯವಲ್ಲ. ಭಾರತದ ಸೇವೆಗಾಗಿ ನಾನು ಇಂಗ್ಲೇಂಡನ್ನಾಗಲೀ,ಜರ್ಮನಿಯನ್ನಾಗಲಿ ನೋಯಿಸು ವುದಿಲ್ಲ"[1]

-ಎಂದಿದ್ದಾರೆ. ಅವರು ಜನತೆಯು ಮಾನವೀಯತೆಯ ಗುಣಗಳನ್ನು ಬೆಳೆಸಿಕೊಳ್ಳಬೇಕು. ಇದರಿಂದ ರಾಷ್ಟ್ರೀಯತೆ ಸತ್ಯ-ಅಹಿಂಸೆಗಳಿಂದ ಕೂಡಿರುತ್ತದೆ. ಆಗ ಬೇರೆ ಯಾರನ್ನು ಶೋಷಣೆಗೆ ಒಳಪಡಿಸಲು ಸಾಧ್ಯವಿಲ್ಲ. ಅಲ್ಲದೆ ಈ ಮಾನವೀಯತೆಯ ಗುಣವನ್ನು ಭಾರತವು ಅಳವಡಿಸಿಕೊಂಡಿರಬೇಕು. ಹೀಗಾದರೆ ಬೇರೆ ದೇಶಗಳನ್ನು ಶೋಷಣೆ ಮಾಡಲು ತಪ್ಪಿಸಬಹುದು. ಇದರಿಂದ ಎಲ್ಲ ಮಾನವ ಜನಾಂಗಕ್ಕೂ ಒಳಿತು ಆಗುತ್ತದೆ. ಭಾರತೀಯರ ಈ ಗುಣದಿಂದ, ಜಗತ್ತಿನ ಇತರ ರಾಷ್ಟ್ರಗಳು ಅಳವಡಿಸಿಕೊಂಡರೆ ಮಾನವ ಕಲ್ಯಾಣವಾದಂತೆ. ಇದನ್ನು ಶ್ರದ್ಧೆಯಿಂದ ಅಳವಡಿಸಿಕೊಂಡರೆ ಯಾವುದೇ ದೇಶಕ್ಕೆ ಅಪಾಯವಿರುವುದಿಲ್ಲ.

ಭಾರತವು ಹಿಂದೂಸ್ಥಾನವೆಂದು ಹೆಸರು ಪಡೆದಿದೆ. ಆದರೂ ಬೇರೆ ಬೇರೆ ದೇಶಗಳಿಂದ ಬರುವ ಜನರು ನಮ್ಮ ರಾಷ್ಟ್ರೀಯತೆಗೆ ಧಕ್ಕೆಯುಂಟು ಮಾಡುವುದಿಲ್ಲ. ಬಂದವರು ಈ ದೇಶದ ವಾತಾರಣಕ್ಕೆ ಬೆರತು ಹೋಗಬೇಕು. ಅಲ್ಲದೆ ತಾವು ಭಾರತೀಯರು ಎಂದು ತಿಳಿದುಕೊಂಡರೆ, ಇದು ಒಂದು ಪ್ರಮುಖ ರಾಷ್ಟ್ರವಾಗುತ್ತದೆ. ಹಿಂದೂಸ್ಥಾನದಲ್ಲಿರುವ ಹಿಂದೂ, ಮುಸ್ಲಿಂ, ಸಿಖ್, ಕ್ರಿಶ್ಚಿಯನ್, ಬೌದ್ಧ, ತಾವೆಲ್ಲರು ಒಂದೇ ಎಂಬ ಭಾವನೆ ಇರಬೇಕು. ಹೀಗಾದರೆ ಮಾತ್ರ ಎಲ್ಲರೂ ಸುಖವಾಗಿರಬಹುದು. ಹಿಂದೂಸ್ಥಾನದಲ್ಲಿ ಕೇವಲ ಹಿಂದೂಗಳು ಅಥವಾ ಮುಸ್ಲಿಮರು ಮಾತ್ರ ಇರಬಾರದು. ಎಲ್ಲ ದೇಶಗಳ ಜನರು ಇದ್ದರೂ ಸಹ ನಮ್ಮ ಐಕ್ಯತೆಯನ್ನು ಸಾಧಿಸಬಹುದು. ಹೀಗಾಗಿ ನಮ್ಮ ಸಾಧನೆಯನ್ನು ನೋಡಿ ಇತರ ದೇಶಗಳು ಅನುಸರಿಸಬಹುದು. ಈ ಹಿನ್ನೆಲೆಯಲ್ಲಿ ಪ್ರಪಂಚದಲ್ಲಿ ಶಾಂತಿ, ನೆಮ್ಮದಿ ನೆಲೆಸಿ ಮಾನವೀಯತೆಗೆ ಗೌರವ ದೊರಕುತ್ತದೆ ಎಂಬ ಚಿಂತನೆ ಗಾಂಧಿ ಅವರದು.

ಆಂಗ್ಲರ ಆಳ್ವಿಕೆಯಿಂದ ಭಾರತದ ಪರಿಸ್ಥಿತಿಯು ಚಿಂತಾಜನಕವಾಗಿತ್ತು. ಅವರು ಭಾರತವನ್ನು ಕೇವಲ ತಮ್ಮ ಮಾರುಕಟ್ಟೆಯನ್ನಾಗಿ ಮಾಡಿಕೊಂಡಿದ್ದಾರೆ. ಅಲ್ಲದೆ ಅವರುಗಳ ಆಳ್ವಿಕೆಯಿಂದ ಭಾರತದ ಗೃಹಕೈಗಾರಿಕೆಗಳು ಕಣ್ಮರೆಯಾಗುತ್ತಿದ್ದವು. ಆದರೂ ಸಹ ಅವರಲ್ಲಿ ಮಾನವೀಯತೆಯ ಗುಣವಿದೆ ಎಂದು ಗಾಂಧಿಯವರು ಗೌರವಿಸುತ್ತಿದ್ದರು. ಆದರೆ ಜಲಿಯನ್‌ವಾಲ ಬಾಗ್ ದುರಂತವಾಗಿ ತಮ್ಮ ನಿಲುವಿನಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾಯಿತು.

ಯಾವುದೇ ಒಂದು ರಾಷ್ಟ್ರದಲ್ಲಿ ಪ್ರಜೆಗಳು ಉತ್ತಮರಾಗಿದ್ದರೆ, ಆ ರಾಷ್ಟ್ರವು ಉತ್ತಮ ರಾಷ್ಟ್ರವೆನಿಸಿಕೊಳ್ಳುತ್ತದೆ. ಈ ಉತ್ತಮರಾದ ಮನುಷ್ಯರು ಸತ್ಯ-ಅಹಿಂಸೆಯ ತತ್ತ್ವಗಳನ್ನು ಪಾಲಿಸಿದರೆ, ಪ್ರಪಂಚದಲ್ಲೇ ಅವರಿಗೆ ಒಳ್ಳೆಯ ಭವಿಷ್ಯವಿರುತ್ತದೆ. ಅವರು ಯಾರನ್ನು ಶೋಷಣೆಗೆ ಒಳಪಡಿಸುವುದಿಲ್ಲ ಎಂಬ ತತ್ತ್ವವು ಗಾಂಧಿ ಅವರಲ್ಲಿತ್ತು. ಗಾಂಧಿ ಅವರು ರಾಷ್ಟ್ರೀಯತೆಯನ್ನು ಕುರಿತು-

"ರಾಷ್ಟ್ರೀಯತೆಯ ವಿಷಯದಲ್ಲಿ ನನಗಿರುವ ಪ್ರೀತಿಯಾಗಲಿ, ನನ್ನ ರಾಷ್ಟ್ರೀಯತೆಯ ಭಾವನೆಯಾಗಲಿ, ಏನೆಂದರೆ ನನ್ನ ದೇಶ ಸ್ವಾತಂತ್ರ್ಯವಾಗಬೇಕು. ಮಾನವೀಯತೆಯ ಒಳಿತಿಗಾಗಿ ಇಡೀ ದೇಶವೇ ನಾಶ ಹೊಂದಲು ಸ್ವಾತಂತ್ರ್ಯವಾಗಿರಬೇಕು. ಇದರಲ್ಲಿ ಜನಾಂಗ ದ್ವೇಷಕ್ಕೆ ಸ್ಥಳವೇ ಇಲ್ಲ. ಇದು ನಮ್ಮ ರಾಷ್ಟ್ರೀಯತೆಯಾಗಲಿ"[1]

-ಎಂದು ಆಶಿಸುತ್ತಿದ್ದರು. ಅವರ ಭಾರತದ ರಾಷ್ಟ್ರೀಯತೆಯು ಆಕ್ರಮಣಕಾರಿಯಲ್ಲ ಮತ್ತು ವಿನಾಶಕಾರಿಯೂ ಅಲ್ಲ ಎಂಬುದಾಗಿತ್ತು. ಅಲ್ಲದೆ ರಾಷ್ಟ್ರೀಯತೆಯೂ ಆರೋಗ್ಯಕರವಾಗಿದ್ದು ಮಾನವೀಯತೆಗೆ, ಮಾನವನು ಸಾಯಲು ಸಿದ್ಧವಿರಬೇಕು. ಬೇರೊಂದು ರಾಷ್ಟ್ರವನ್ನು ಆಕ್ರಮಣ ಮಾಡದೆ, ಶೋಷಣೆ ಮಾಡದೆ ಮೊದಲು ಭಾರತವು ಬದುಕುವುದನ್ನು ಅರಿತುಕೊಳ್ಳಬೇಕು. ಹೀಗಾಗಿ ಭಾರತೀಯರ ಆಶೋತ್ತರಗಳು ಈಡೇರಬಹುದು. ಅಲ್ಲದೆ ಮಾನವ ಜನಾಂಗವು ಬದುಕಲು ಸಾಧ್ಯವಾಗುತ್ತೆ ಎಂಬುದು. ಗಾಂಧಿ ಅವರು ಆಂಗ್ಲರ ವಿರುದ್ಧ ಸ್ವಾತಂತ್ರ್ಯವನ್ನು ಪಡೆಯುವ ವಿಚಾರದಲ್ಲಿ "ಬೆಕ್ಕಿನ ದವಡೆಯಲ್ಲಿ ಇಲಿ ಸಿಕ್ಕಿಕೊಂಡಿದೆ. ಆದ್ದರಿಂದ ನಾವು ಜೋಪಾನವಾಗಿ ಬಿಡಿಸಿಕೊಳ್ಳಬೇಕಾಗಿದೆ. ಅದಕ್ಕೆ ಉತ್ತಮ ಮಾರ್ಗವೆಂದರೆ ಸತ್ಯ-ಅಹಿಂಸೆಗಳೇ ಆಗಿವೆ" ಎಂದು ಹೇಳುತ್ತಿದ್ದುದುಂಟು.

ಆದರೆ ರಾಷ್ಟ್ರ-ರಾಷ್ಟ್ರೀಯತೆಗಳನ್ನು ವಿಶ್ವೇಶ್ವರಯ್ಯ ಅವರು ಪರಿಭಾವಿಸುತ್ತಿದ್ದ ಬಗೆಯೇ ಭಿನ್ನವಾದುದು. ಅವರು ರಾಷ್ಟ್ರದ ಪರಿಕಲ್ಪನೆಯನ್ನು ಒಬ್ಬ ಸರ್ಕಾರಿ ಅಧಿಕಾರಿಯಾಗಿ ಪರಿಗಣಿಸುತ್ತಿದ್ದರು. ಇವರ ಚಿಂತನೆಯಲ್ಲಿ ಒಂದು ರಾಷ್ಟ್ರವು ಉತ್ತಮವಾಗಬೇಕಾದರೆ, ಆ ರಾಷ್ಟ್ರದಲ್ಲಿರುವ ಜನರು ದಕ್ಷರು, ನೀತಿವಂತರು, ಕರ್ತವ್ಯಪಾಲಕರು ಆಗಿರಬೇಕು. ಅಲ್ಲದೆ ಅವರು ಪ್ರಜ್ಞಾವಂತರಾಗಿದ್ದು ನಂಬಿಕೆಗೆ ಅರ್ಹರಾಗಿರುವುದು ಮತ್ತು ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡಿದ್ದರೆ, ಆ ರಾಷ್ಟ್ರವು ಅಭಿವೃದ್ಧಿ ಹೊಂದುವುದಕ್ಕೆ ಸಾಧ್ಯ ಎಂಬ ಅಂಶಗಳು ವ್ಯಕ್ತ ಆಗುತ್ತಿದ್ದವು.

ವಿಶ್ವೇಶ್ವರಯ್ಯ ಅವರು ನಮ್ಮ ದೇಶದಲ್ಲಿರುವ ಅಂಧಕಾರ, ಮೂಢನಂಬಿಕೆ, ಸಂಪ್ರದಾಯಗಳಿಂದ ಜನರ ಹೊರಬರಬೇಕಾಗಿದೆ. ತಮ್ಮ ದಾರಿದ್ರ್ಯವೆಂದು ತಿಳಿಯದೆ, ಯಾವುದಾದರೂ ಒಂದು ಕ್ಷೇತ್ರದಲ್ಲಿ ಕೆಲಸ ಮಾಡಬಹುದು. ಆ ಮುಖಾಂತರ ತಮ್ಮ ದಾರಿದ್ರ್ಯವನ್ನು ಹೋಗಲಾಡಿಸಲು ಸಾಧ್ಯ. ಇದರಿಂದ ರಾಷ್ಟ್ರದ ಪ್ರಗತಿಗಾಗಿ ಭಾಗವಹಿಸುವಂತಾಗುತ್ತದೆ ಎಂಬುದು ಅವರ ನಿಲುವು.

ವಿಶ್ವೇಶ್ವರಯ್ಯ ಅವರು ರಾಷ್ಟ್ರೀಯತೆ ಬಗ್ಗೆ ಎಂದೂ ಮುಕ್ತವಾಗಿ ಗಾಂಧಿಯವರಂತೆ ಚರ್ಚಿಸಿಲ್ಲ. ಆದರೆ ಅವರು ಹಾಕಿಕೊಂಡ ನಿರ್ವಹಿಸಿದ ಯೋಜನೆಗಳು ರಾಷ್ಟ್ರೀಯತೆಯ ಪ್ರತೀಕವೇ ಆಗಿವೆ. ಅವರು ಸರ್ಕಾರಿ ಹುದ್ದೆಯಲ್ಲಿದ್ದು ದೇಶದ ಅಭಿವೃದ್ಧಿಗೆ ಚಿಂತಿಸಿದವರು. ಭಾರತದ ಭವಿಷ್ಯದ ಬಗ್ಗೆ ಆಲೋಚಿಸಿದ ಅವರು ಕೃಷ್ಣರಾಜಸಾಗರ ಅಣ್ಣೆಕಟ್ಟೆ, ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆ ಮೊದಲಾದವುಗಳನ್ನು ಸ್ವದೇಶಿಯ ನೆಲೆಯಿಂದ ನಿರ್ಮಾಣ ಮಾಡಿದ್ದರು. ಇದು ವಿಶ್ವೇಶ್ವರಯ್ಯ ಅವರ

ದೇಶಪ್ರೇಮದ ಇನ್ನೊಂದು ರೂಪ. ಅಲ್ಲದೆ ಇವರು ವಿದೇಶಿ ನೆಲೆಯಿಂದಲೂ ದೇಶದ ಅಭಿವೃದ್ಧಿಗಾಗಿ ಚಿಂತಿಸಿದ್ದೂ ಇದೆ. ಆದ್ದರಿಂದಲೇ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರಗತಿ ಕಾಣುವಂತಾಯಿತು. ಅದರ ಅನುಕೂಲಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯವನ್ನೂ ಸ್ಥಾಪಿಸಿದರು.

ಯುರೋಪಿಯನ್ನರು ಎಲ್ಲಾ ಕ್ಷೇತ್ರಗಳಲ್ಲೂ ಪ್ರಗತಿ ಸಾಧಿಸಿದ ಹಾಗೆ ನಾವು ಅವರಂತೆ ಪ್ರಗತಿ ಸಾಧಿಸಬೇಕು ಎಂಬುದು ಇವರ ದಿಟ್ಟ ನಿಲುವು. ಈ ದಿಸೆಯಲ್ಲಿ ತಮ್ಮನ್ನು ದೇಶ ಸೇವೆಗೆ ಸಂಪೂರ್ಣ ವಾಗಿ ತೊಡಗಿಸಿಕೊಂಡರು. ಇವರಲ್ಲಿ ಯಾವುದೇ ರೀತಿಯ ಸ್ವಾರ್ಥ ಮನೋಭಾವನೆ ಇಲ್ಲದೆ, ಪ್ರಾಮಾಣಿಕತೆ ಮಾನವೀಯತೆಗಳು ಎದ್ದು ಕಾಣುತ್ತಿದ್ದವು. ೧೯೨೯ರಲ್ಲಿ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಿಂದ ನಿವೃತ್ತರಾದರು. ಅಲ್ಲದೆ ಇವರು ಅಧ್ಯಕ್ಷರಾಗಿ ಕಾರ್ಖಾನೆಯಲ್ಲಿ ಸಂಪೂರ್ಣವಾಗಿ, ಸ್ವದೇಶಿ ಜನರಿಂದ ದಕ್ಷವಾಗಿ ಆಡಳಿತ ನಿರ್ವಹಿಸಿದ್ದಲ್ಲದೆ ಅದು ಅಭಿವೃದ್ಧಿಗೊಂಡು ಲಾಭ ಪಡೆಯುವಂತೆ ಮಾಡಿದ್ದರು. ಈ ಸಾಧನೆಗೆ ಸಲ್ಲಬೇಕಾದ ಸಂಭಾವನೆಯನ್ನು ಕೊಡಲು ಮಹಾರಾಜರು ಮುಂದಾದರು. ಆದರೆ ಅದನ್ನು ವಿಶ್ವೇಶ್ವರಯ್ಯ ಅವರು ನಿರಾಕರಿಸಿ, ಒಂದು ತಾಂತ್ರಿಕ ಕಾಲೇಜನ್ನು ಸ್ಥಾಪಿಸಲು ಮನವಿ ಮಾಡಿಕೊಂಡರು. ಕಾಲೇಜಿಗೆ ಮಹಾರಾಜರು ವಿಶ್ವೇಶ್ವರಯ್ಯನವರ ಹೆಸರನ್ನೇ ಇಡಲು ಇಚ್ಛಿಸಿದಾಗ ಒಪ್ಪಿಕೊಳ್ಳದೆ ಯುವರಾಜರ ಹೆಸರನ್ನಿಡಲು ಸೂಚಿಸಲಾಯಿತು. ಹೀಗಾಗಿ ಬೆಂಗಳೂರಿನಲ್ಲಿ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣಾಲಯ ಸ್ಥಾಪನೆಗೊಂಡಿತು.

ವಿಶ್ವೇಶ್ವರಯ್ಯ ಅವರು ಕೇವಲ ಮೈಸೂರು ಸಂಸ್ಥಾನದ ಪ್ರಗತಿಗಾಗಿ ಚಿಂತಿಸಿದವರಲ್ಲ. ಅವರು ಇಡೀ ಭಾರತವು ಅಭಿವೃದ್ಧಿಗೊಳ್ಳಬೇಕೆಂದು ಬಯಸಿದವರು. ಹೀಗಾಗಿ ಅವರು ಭಾರತದ ಇತರ ಸಂಸ್ಥಾನಗಳಲ್ಲಿಯೂ ಅನೇಕ ಯೋಜನೆಯನ್ನು ಹಾಕಿಕೊಟ್ಟು, ಅಭಿವೃದ್ಧಿಗೆ ಸಲಹೆ ನೀಡುತ್ತಿದುದ್ದುಂಟು. ಇವರು ಪ್ರಮುಖವಾಗಿ ಹೈದರಾಬಾದ್, ಕೊಲ್ಹಾಪುರ, ಮುಂಬಯಿ, ಅಹಮದಾಬಾದ್, ರಾಜ್‌ಕೋಟೆ, ಇಂದೋರ್ ಇನ್ನು ಮುಂತಾದ ಪ್ರದೇಶಗಳಲ್ಲಿ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸಿ ಯಶಸ್ವಿಗೊಳಿಸಿದವರು. ಒರಿಸ್ಸಾವು ಮೊದಲಿನಿಂದಲೂ ಮಹಾನದಿಯ ಪ್ರವಾಹದಿಂದ ಹಾನಿಗೀಡಾಗಿತ್ತು. ಇದನ್ನು ತಪ್ಪಿಸಲು ಗಾಂಧಿಯವರು ವಿಶ್ವೇಶ್ವರಯ್ಯನವರನ್ನು ಕೇಳಿಕೊಂಡರು. ಅವರ ಮಾತಿಗೆ ಒಗೊಟ್ಟು ೧೯೩೭ರಲ್ಲಿ ಪ್ರವಾಹವನ್ನು ತಪ್ಪಿಸಲು ಸಲಹೆಗಳನ್ನು ನೀಡಿದ್ದರು. ಅಲ್ಲದೆ ೧೯೫೨ರಲ್ಲಿ ಗಂಗಾನದಿಗೆ ಸೇತುವೆ ನಿರ್ಮಾಣ ಮಾಡಲು ಇವರ ಸಲಹೆಯನ್ನು ಭಾರತ ಸರ್ಕಾರ ಕೇಳಿಕೊಂಡಿತು. ಹೀಗಾಗಿ ಅವರು ಒಂದು ಸೂಕ್ತವಾದ ಸ್ಥಳವನ್ನು ಪರಿಶೀಲಿಸಿ ಸೇತುವೆ ನಿರ್ಮಾಣಕ್ಕಾಗಿ ಸಲಹೆ ಸೂಚಿಸಿದರು. ಈ ರೀತಿಯಾಗಿ ಭಾರತದ ಅನೇಕ ಪ್ರಾಂತ್ಯ (ರಾಜ್ಯ)ಗಳಲ್ಲಿ ಇವರು ಸಲ್ಲಿಸಿದ ಸೇವೆ ಗಮನಾರ್ಹವಾದುದು.

ಒಟ್ಟಿನಲ್ಲಿ ವಿಶ್ವೇಶ್ವರಯ್ಯ ಅವರು ತಮ್ಮ ದೂರದೃಷ್ಟಿ, ಧೈರ್ಯ, ದೃಢತೆ, ವಿಶ್ವಾಸಗಳಿಗಾಗಿ ಅಪಾರ ಜನ ಮೆಚ್ಚುಗೆಗಳಿಸಿದರು. ಈ ಹಿನ್ನೆಲೆಯಲ್ಲಿಯೇ ವಿಶ್ವೇಶ್ವರಯ್ಯನವರ ರಾಷ್ಟ್ರ-ರಾಷ್ಟ್ರೀಯತೆಯನ್ನು ಗುರುತಿಸಬಹುದು.

### ೫.೨. ದಾಸ್ಯ-ಸ್ವಾತಂತ್ರ್ಯ

ಆಂಗ್ಲರು ಭಾರತೀಯರಿಗೆ ಕಲ್ಪಿಸಿಕೊಟ್ಟ ಶಿಕ್ಷಣ ವ್ಯವಸ್ಥೆ, ರೈಲು ವ್ಯವಸ್ಥೆ, ಕಾನೂನು, ಆಡಳಿತ ವ್ಯವಸ್ಥೆ, ಪೋಲಿಸ್, ಸೈನ್ಯ ಇವುಗಳೆಲ್ಲವೂ ದಾಸ್ಯದ ಸಂಕೋಲೆಗಳೆಂದೇ ಹೇಳಬಹುದು. ಆದ್ದರಿಂದಾಗಿ ಗಾಂಧಿಯವರು ಈ ಎಲ್ಲ ವ್ಯವಸ್ಥೆಗಳನ್ನು ದೇಶಿಯ ನೆಲೆಯಿಂದಲೇ ನಡೆಸಬೇಕು ಎಂದು ಆಲೋಚಿಸಿದವರು. ಗಾಂಧಿ ಅವರು ದಾಸ್ಯ, ಸ್ವಾತಂತ್ರ್ಯದ ಬಗ್ಗೆ -

> "ಸ್ವಾತಂತ್ರ್ಯ-ದಾಸ್ಯ ಎರಡೂ ಮನಸ್ಸಿನ ಸ್ಥಿತಿಗಳು. ಆದ್ದರಿಂದ ಮೊಟ್ಟಮೊದಲು ನಿಮಗೆ ನೀವೇ ಹೇಳಿಕೊಳ್ಳಿ; ಇನ್ನು ಮುಂದೆ ನಾನು ಗುಲಾಮನಾಗಿ ಇರುವುದಿಲ್ಲ. ಎಲ್ಲ ಅಪ್ಪಣೆಗಳನ್ನು ಇನ್ನು ನಡೆಸುವುದಿಲ್ಲ. ನನ್ನ ಅಂತಃಕರಣಕ್ಕೆ ವಿರುದ್ಧವಾಗಿದ್ದರೆ ಅದನ್ನು ವಿರೋಧಿಸುತ್ತೇನೆ. ನಿಮ್ಮ ಒಡೆಯ ಎಂಬುವವನು ನಿಮ್ಮನ್ನು ಹೊಡೆಯ ಬಹುದು. ಬಲತ್ಕಾರದಿಂದ ಕೆಲಸ ಮಾಡಲಿಕ್ಕೆ. ನೀವು ಆಗ ಹೇಳಿ 'ಇಲ್ಲ' ನಿನ್ನ ದುಡ್ಡಿಗಾಗಿ, ನಿನ್ನ ಬೆದರಿಕೆಗಾಗಿ ನಾನು ಕೆಲಸ ಮಾಡುವುದಿಲ್ಲ. ಹೀಗೆಂದರೆ ಕಷ್ಟವನ್ನು ಅನುಭವಿಸಿಬೇಕಾದಿತು. ಕಷ್ಟ ಸಹನೆಗೆ ನೀವು ಸಿದ್ಧರಾದರೆ ಅದು ನಿಮ್ಮ ಸ್ವಾತಂತ್ರ್ಯ ಜ್ಯೋತಿಯನ್ನು ಎಂದೂ ನಂದದ ಹಾಗೆ ಹತ್ತೀಸಿತು"[೪]

-ಎಂದಿದ್ದಾರೆ. ಗಾಂಧಿ ಅವರು ಸತ್ಯ-ಅಹಿಂಸೆಯ ಮಾರ್ಗವಾಗಿ ಜನರು ದಾಸ್ಯದಿಂದ ಮುಕ್ತರಾಗಬೇಕು. ಅವರು ಎಷ್ಟು ಹಿಂಸೆಯನ್ನು ಕೊಟ್ಟರೂ, ಸಹಿಸಿಕೊಂಡು ಅವರ ವಿರುದ್ಧ, ಅಹಿಂಸೆಯ ಮಾರ್ಗವನ್ನು ಅನುಸರಿಸಿದರೆ ಸ್ವಾತಂತ್ರ್ಯವನ್ನು ಪಡೆಯಬಹುದು. ಅಹಿಂಸೆಯ ಮಾರ್ಗದಿಂದ ಸಾತಂತ್ರ್ಯವನ್ನು ಪಡೆದರೆ ಅದು ಶಾಶ್ವತವಾಗಿ ಅಲ್ಲದೆ ಭದ್ರವಾಗಿ ಉಳಿಯುತ್ತದೆ. ಇದಕ್ಕಾಗಿ ಮನುಷ್ಯರಲ್ಲಿ ಸಹನೆ, ಧೈರ್ಯ, ದೃಢ ವಿಶ್ವಾಸವಿರಬೇಕು. ಇದನ್ನು ಅಳವಡಿಸಿಕೊಂಡರೆ ಎಂತಹ ಕಷ್ಟಗಳು ಬಂದರೂ ಸಹ ಅದನ್ನು ಅಹಿಂಸೆಯ ಮಾರ್ಗದಿಂದ ಎದುರಿಸಲು ಸಾಧ್ಯವಾಗುತ್ತದೆ ಎನ್ನುತ್ತಿದ್ದರು.

ಗಾಂಧಿ ಅವರ ಚಿಂತನೆಯಲ್ಲಿ ರಾಟೆಯೆ ಒಂದು ಸ್ವಾತಂತ್ರ್ಯದ ಸಂಕೇತ. ಆದರೆ ರಾಟೆಗೆ ಹಿಂದೆ ಸ್ವಾತಂತ್ರ್ಯವಿರಲಿಲ್ಲ. ಅದಕ್ಕಾಗಿ ನಾವು ಅವುಗಳನ್ನು ಸರಿಯಾಗಿ ಬಳಸಿಕೊಳ್ಳಲು ಸಾಧ್ಯವಾಗಲಿಲ್ಲ. ಯಾಕೆಂದರೆ ನಮ್ಮಲ್ಲಿರುವ ಅಜ್ಞಾನ, ಅವಿವೇಕಗಳಿಂದಾಗಿ. ಆದರೆ ನಮಗೆ ಈಗ ಜ್ಞಾನೋದಯ ವಾಗಿದೆ. ಹೀಗಾಗಿ ಈ ರಾಟೆಯನ್ನು ನಾವು ಸರಿಯಾಗಿ ಬಳಸಿಕೊಳ್ಳಬೇಕು. ಈ ರಾಟೆಯನ್ನು ಬಳಸುವುದಕ್ಕೆ ನಮಗೆ ಸಂಪೂರ್ಣ ಸ್ವಾತಂತ್ರ್ಯವಿರಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ. ಭಾರತದಲ್ಲಿ ಆಂಗ್ಲರ ಆಗಮನದಿಂದ ಗೃಹ ಕೈಗಾರಿಕೆಗಳು ನಶಿಸತೊಡಿಗಿದ್ದವು. ಹೀಗಾಗಿ ಭಾರತವು ಹೆಚ್ಚು ಜನಸಂಖ್ಯೆಯನ್ನು ಹೊಂದಿರುವುದಲ್ಲದೆ ಹಳ್ಳಿಗಳಿಂದ ಕೂಡಿದ ರಾಷ್ಟ್ರ. ಹೀಗಾಗಿ ಗುಡಿಕೈಗಾರಿಕೆಗೆ

ಅದರಲ್ಲೂ ಮುಖ್ಯವಾಗಿ ರಾಟೆಗೆ ಉತ್ತೇಜನ ನೀಡುವುದು ಅನಿವಾರ್ಯ. ಆ ಮೂಲಕ ಮಾತ್ರ ಭಾರತೀಯರಿಗೆ ಹೆಚ್ಚಿನ ಸ್ವಾತಂತ್ರ್ಯ ದೊರಕಲು ಸಾಧ್ಯ ಎಂದು ತಿಳಿದುಕೊಂಡಿದ್ದರು.

ಗಾಂಧಿ ಸಮಾಜವಾದದಲ್ಲಿ ವಿಶ್ವಾಸವಿಟ್ಟಿದ್ದವರು. ಭಾರತವು ಸ್ವಾತಂತ್ರ್ಯ ಪಡೆದರೆ ಅದು ಕೆಳಮಟ್ಟದಿಂದ ಮಾತ್ರ ಪಡೆಯಬೇಕು. ಪಟ್ಟಣ ಮತ್ತು ನಗರಗಳ ಜನರು ಗುಲಾಮರಲ್ಲ. ಆದರೆ ಹಳ್ಳಿಗಳು ಮತ್ತು ಪ್ರತಿಯೊಬ್ಬ ಹಳ್ಳಿಗನೂ ಗುಲಾಮಗಿರಿಯಿಂದ ಮುಕ್ತರಾಗಬೇಕು. ಪ್ರತಿಯೊಂದು ಹಳ್ಳಿಯು ಸ್ವತಂತ್ರ್ಯವಾಗಿ ಆಡಳಿತವನ್ನು ನಡೆಸಲು ಸಾಧ್ಯವಿದೆ. ಹಳ್ಳಿಯಲ್ಲಿರುವ ಎಲ್ಲ ಜನರಿಗೂ ಸಮಾನ ಅವಕಾಶವನ್ನು ಕಲ್ಪಿಸಿಕೊಡಬೇಕಾಗಿದೆ. ಇವರಲ್ಲಿ ಯಾರು ಶ್ರೇಷ್ಠರಲ್ಲ. ತಮ್ಮ ಆಡಳಿತವನ್ನು ಪ್ರಾಮಾಣಿಕತೆಯಿಂದ, ಧೃಡತೆಯಿಂದ, ವಿಶ್ವಾಸವಿಟ್ಟು ನಡೆಸಿದರೆ ಮಾತ್ರ ಎಲ್ಲರೂ ಸುಖವಾಗಿ ನೆಮ್ಮದಿಯಿಂದ ಇರಲು ಸಾಧ್ಯ ಎನ್ನುತ್ತಿದುದ್ದುಂಟು.

ಗಾಂಧಿ ಅವರಿಗೆ ಹಳ್ಳಿಯೇ ಆಡಳಿತ ಪ್ರಧಾನ ಘಟಕ. ಹಳ್ಳಿಗಳು ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿರುತ್ತವೆ. ಈ ಹಳ್ಳಿಗಳು ಕೇಂದ್ರ ಸರ್ಕಾರದಿಂದ ಮುಕ್ತವಾಗಿ, ಆಡಳಿತವನ್ನು ನಡೆಸಬೇಕು. ಪ್ರತಿಯೊಂದು ಹಳ್ಳಿಯವರು ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುತ್ತಾರೆ. ಹೀಗಾಗಿ ಅವರಿಗೆ ಸರಿಯಾದ ಶಿಕ್ಷಣ ವ್ಯವಸ್ಥೆಯನ್ನು ದೇಶಿಯ ನೆಲೆಯಿಂದ ಕಲ್ಪಿಸಿಕೊಡಬೇಕು. ಆಗ ಮಾತ್ರ ಹಳ್ಳಿಗನು ನಗರ ಪಟ್ಟಣಗಳಿಂದ ಶೋಷಣೆಗೆ ಗುರಿಯಾಗುವುದು ತಪ್ಪುತ್ತದೆ. ಅಲ್ಲದೆ ಪ್ರತಿಯೊಂದು ಹಳ್ಳಿಗನೂ ಉತ್ಪಾದನೆ ಮಾಡಿದ ವಸ್ತುಗಳನ್ನು ನಗರಗಳಲ್ಲಿ ತಂದು ಮಾರಲು ಸಾಧ್ಯವಿದೆ. ಈ ಹೊತ್ತಿಗೂ ನಗರಗಳಿಂದ ಶೋಷಣೆಗೆ ಒಳಗಾಗುತ್ತಿರುವುದು ಹಳ್ಳಿಗನೇ ಆಗಿದ್ದಾನೆ. ವ್ಯಾಪಾರದಲ್ಲಿಯು ಸಹ ಮೋಸ, ವಂಚನೆ, ಭ್ರಷ್ಟಾಚಾರಗಳು ನಡೆಯುತ್ತಿವೆ. ಇದನ್ನು ಸೂಕ್ತ ರೀತಿಯಲ್ಲಿ ಪರಿಶೀಲಿಸಿ, ಸರಿಯಾದ ಕ್ರಮ ತೆಗೆದುಕೊಂಡರೆ ರೈತನಿಗೆ ಆಗುತ್ತಿರುವ ಶೋಷಣೆಯನ್ನು ತಪ್ಪಿಸಬಹುದು.

ಗಾಂಧಿ ಅವರು ಪ್ರಜಾಪ್ರಭುತ್ವದ ಬಗ್ಗೆ ನಂಬಿಕೆ ಇಟ್ಟಿದ್ದರು. ಅವರು ಆಡಳಿತವು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿರಬೇಕು. ಈ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸಿಕೊಟ್ಟರೆ, ಮಾತ್ರ ಇದು ಉತ್ತಮ ರಾಷ್ಟ್ರವಾಗುವುದರ ಜೊತೆಗೆ ಸಂಪೂರ್ಣವಾಗಿ ಸ್ವಾತಂತ್ರ್ಯ ಪಡೆದುದ್ದಕ್ಕೆ ಸಾರ್ಥಕವಾಗುತ್ತದೆ. ಮನುಷ್ಯನಾದವನು ಮಾನಸಿಕವಾಗಿ, ಶಾರೀರಿಕವಾಗಿ, ನಿರುತ್ಸಾಹವನ್ನು ಹೋಗಲಾಡಿಸಿ, ತನ್ನ ಸೃಜನಾತ್ಮಕ ವೃತ್ತಿಗೆ ಒಳಗಾದರೆ ಅವನು ದಾಸ್ಯದಿಂದ ಮುಕ್ತನಾಗುತ್ತಾನೆ. ಅವರು ಹೇಳುತ್ತಿದ್ದ ನೂಲುವುದು, ನೇಯುವುದನ್ನು ಸಾರ್ವತ್ರಿಕವಾಗಿ ಪ್ರಯೋಗ ಮಾಡಿದರೆ ಅದರ ಉದ್ದೇಶ ಮತ್ತು ಸಂಕೇತವು ಆತನಿಗೆ ಅರಿತವಾಗುತ್ತದೆ. ಆಗ ಮಾತ್ರ ವೈವಿಧ್ಯತೆಗಳಿಂದ ಕೂಡಿರುವ ಭಾರತವು ಸಂಪೂರ್ಣವಾಗಿ ದಾಸ್ಯದಿಂದ ವಿಮೋಚನೆ ಪಡೆದಂತೆ ಆಗುತ್ತದೆ ಎಂದು ಆಶಿಸುತ್ತಿದ್ದರು. ಗಾಂಧಿ ಅವರು ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವವನ್ನು ಕುರಿತು-

"ನನ್ನ ಸ್ವಾತಂತ್ರ್ಯವನ್ನೂ, ನನ್ನ ದೇಶದ ಸ್ವಾತಂತ್ರ್ಯವನ್ನು, ಅಂತೆಯೇ ಮಾನವ ಜಾತೀಯ ಸ್ವಾತಂತ್ರ್ಯವನ್ನು, ಶುದ್ಧ ಅಹಿಂಸಾತ್ಮಕ ಸಾಧನದಿಂದ ಸಂರಕ್ಷಣ ಮಾಡುವುದೇ ನಿಜವಾದ ಪ್ರಜಾತಂತ್ರ್ಯವಾದ"[೫]

-ಎಂದಿದ್ದಾರೆ.

ಗಾಂಧಿ ಅವರು ಅಧಿಕಾರ ಕೇಂದ್ರಿಕರಣಕ್ಕೆ ವಿರೋಧ ವ್ಯಕ್ತಪಡಿಸುತ್ತಿದುದ್ದುಂಟು. ಅವರು ಅಧಿಕಾರ ವಿಕೇಂದ್ರಿಕರಣದ ಪರವಾಗಿ ಚಿಂತನೆ ನಡೆಸಿದ್ದರು. ಅಧಿಕಾರ ಕೇಂದ್ರಿಕರಣದಿಂದ ಬಹುಸಂಖ್ಯಾತರನ್ನು ಶೋಷಣೆ ಮಾಡಿದಂತಾಗುತ್ತದೆ. ಆದ್ದರಿಂದ ಪ್ರತಿಯೊಬ್ಬ ಪ್ರಜೆಗೂ ವ್ಯಕ್ತಿ ಸ್ವಾತಂತ್ರ್ಯವಿರಬೇಕು. ಹೀಗಾದರೆ ಮಾತ್ರ ಯಾರಿಂದಲೂ ಆತ ಶೋಷಣೆಗೆ ಒಳಪಡುವುದಿಲ್ಲ. ಇದರಿಂದಾಗಿ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸಿಕೊಟ್ಟಂತಾಗುತ್ತದೆ. ಪ್ರಜಾಪ್ರತಿನಿಧಿಗಳು ಬಹುಸಂಖ್ಯಾತರ ಬೆಂಬಲದಿಂದ ಅಧಿಕಾರ ನಡೆಸಿದರೂ ಕೂಡ, ಇನ್ನುಳಿದ ಬಹುಸಂಖ್ಯಾತ ಪ್ರಜೆಗಳ ವಿರೋಧ ಒಂದಲ್ಲ ಒಂದು ರೀತಿಯಲ್ಲಿರುತ್ತದೆ. ಅದಕ್ಕಾಗಿ ಪ್ರಜೆಗಳ ತೀರ್ಮಾನವೇ ಅಂತಿಮ ತೀರ್ಮಾನವಾಗಬೇಕು. ಆದ್ದರಿಂದಲೇ ಅವರು ಸ್ವಿಡ್ಜರ್‌ಲ್ಯಾಂಡಿನ ಪ್ರಜಾಪ್ರಭುತ್ವವು ನಮ್ಮ ದೇಶದಲ್ಲಿದ್ದರೆ ತುಂಬ ಅನುಕೂಲ. ಇದರಿಂದಾಗಿ ಇಲ್ಲಿ ಯಾರೂ ಯಾರಿಗೆ ಗುಲಾಮರಾಗುವುದಿಲ್ಲ. ಅಲ್ಲದೆ ಇದರಿಂದ ಯಾರು ಯಾರನ್ನು ಶೋಷಿಸಲು ಸಾಧ್ಯವಾಗುವುದಿಲ್ಲ ಎಂಬ ನಿಲುವನ್ನು ತಳೆದಿದ್ದುದು.

ಗಾಂಧಿ ಅವರು ಭಾರತೀಯರು ಸ್ವಾತಂತ್ರ್ಯವನ್ನು ಪಡೆಯಲು ಬೇರೆಯವರ ಸಹಾಯವನ್ನು ಪಡೆಯಲು ವಿರೋಧಿಸುತ್ತಿದುದ್ದುಂಟು. ಭಾರತೀಯರು ತಮ್ಮ ದೇಶದಿಂದ ಆಂಗ್ಲರನ್ನು ಹೊರದೂಡುವ ಶಕ್ತಿಯನ್ನು ಹೊಂದಿದ್ದಾರೆ ಎಂಬುದರಲ್ಲಿ ದೃಢ ವಿಶ್ವಾಸವಿತ್ತು. ಹೀಗಾಗಿ ಬೇರೆಯವರ ಸಹಾಯವನ್ನು ತಿರಸ್ಕರಿಸಿದರು. ಈ ಸ್ವಾತಂತ್ರ್ಯವನ್ನು ಪಡೆಯುವುದು ಇತರರಿಗೆ ತೊಂದರೆ ಕೊಡುವುದಕ್ಕಲ್ಲ. ಬದಲಾಗಿ ಇಡೀ ಮಾನವೀಯತೆಯ ಅಧಾರದ ಮೇಲೆ ದೇಶದ ಸ್ವಾತಂತ್ರ್ಯವಿರುತ್ತದೆ. ಹೀಗಾಗಿ ಅಹಿಂಸೆಯ ನೀತಿಯನ್ನು ಮುಂದುವರೆಸಿಕೊಂಡು ಹೋಗಬೇಕಾಗಿದೆ. ಇದರಿಂದ ಯಾರ ಮೇಲೆ ದ್ವೇಷ ಸಾಧಿಸಲು ಸಾಧ್ಯವಿಲ್ಲವೆಂದು ಆಶಿಸುತ್ತಿದ್ದರು.

ಗಾಂಧಿ ಅವರು ಭಾರತೀಯರು ಆಂಗ್ಲರ ವಿರುದ್ಧವಾಗಿ ಹೋರಾಡಿ ಸ್ವಾತಂತ್ರ್ಯವನ್ನು ಪಡೆದುಕೊಂಡ ಅನಂತರ, ದೇಶಿ ರಾಜರುಗಳ ಆಳ್ವಿಕೆಯಿಂದ ಜನರಿಗೆ ತೊಂದರೆಯಾದರೆ ಅವರ ವಿರುದ್ಧ ಹೋರಾಡುತ್ತೇನೆ. ಒಂದು ವೇಳೆ ಆಂಗ್ಲರು ಭಾರತೀಯರಿಗೆ ಸಮಗ್ರ ಮಾನವಕಲ್ಯಾಣಕ್ಕಾಗಿ ದುಡಿದರೆ ನಾನು ಅವರಿಗೆ ತಲೆಬಾಗುತ್ತೇನೆ. ಅದಕ್ಕೆ ಬದಲಾದರೆ ಅವರ ವಿರುದ್ಧ ನನ್ನ ಸತ್ಯ-ಅಹಿಂಸೆ, ಸತ್ಯಾಗ್ರಹ ಮೂಲಕ ಸ್ವಾತಂತ್ರ್ಯವನ್ನು ಪಡೆಯುತ್ತೇನೆ ಎನ್ನುತ್ತಿದ್ದುದುಂಟು. ಅಲ್ಲದೆ ಆಂಗ್ಲರು ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ನೀಡಿ, ಹೋರಾಟವನ್ನು ಆರಂಭಿಸಿದರೆ ಅವರನ್ನು ವಿರೋಧಿಸುತ್ತೇನೆ.

ಏಕೆಂದರೆ ಅವರು ಭಾರತೀಯರಲ್ಲ. ಒಂದು ವೇಳೆ ಅವರೇ ಭಾರತೀಯರೆಂದು ತಿಳಿದುಕೊಂಡರೆ ಅವರನ್ನು ಸ್ವಾಗತಿಸುವುದು ಸೂಕ್ತ ಎನ್ನುತ್ತಿದ್ದರು. ಗಾಂಧಿ ಅವರು ಭಾರತದ ಸ್ವಾತಂತ್ರ್ಯಕ್ಕೆ ಸಂಬಂಧಿಸಿದಂತೆ-

> "ಭಾರತದ ಸ್ವಾತಂತ್ರ್ಯಕ್ಕಾಗಿ ನಾನು ಬದುಕಿದ್ದೇನೆ. ಅದಕ್ಕಾಗಿ ಬೇಕಾದರೆ ಸಾಯುತ್ತೇನೆ. ಏಕೆಂದರೆ, ಅದು ಸತ್ಯದ ಅಂಶ, ನಿಜವಾದ ದೇವರನ್ನು ಪೂಜಿಸಲು ಸ್ವತಂತ್ರ್ಯ ಭಾರತಕ್ಕೆ ಮಾತ್ರ ಸಾಧ್ಯ. ನಾನು ಭಾರತದಲ್ಲಿ ಹುಟ್ಟಿದೆ. ಅದರ ಪರಂಪಾರಗತ ಸಂಸ್ಕೃತಿ ನನಗೆ ಸಹಜವಾಗಿ ಬಂದಿದೆ. ಆದ್ದರಿಂದ ಭಾರತದ ಸೇವೆ ಮಾಡಲು ನಾನು ಯೋಗ್ಯ. ನನ್ನ ಸೇವೆಯ ಮೊದಲನೆ ಅಧಿಕಾರ ಭಾರತದ್ದು. ಹೀಗೆ ನನ್ನ ಸ್ವದೇಶಿ ಧರ್ಮ ಹೇಳುತ್ತದೆ. ಆದ್ದರಿಂದ ನಾನು ಭಾರತದ ಸ್ವಾತಂತ್ರ್ಯಕ್ಕಾಗಿ ದುಡಿಯುತ್ತಿದ್ದೇನೆ. ಆದರೆ ನನ್ನ ದೇಶಭಕ್ತಿ ಏಕಾಂಗಿಯಲ್ಲ. ಇತರ ರಾಷ್ಟ್ರಗಳಿಗೆ ಹಾನಿ ಮಾಡಬಾರದು ಎಂಬುದು ಸರಿಯೆ. ನಿಜವಾಗಿ ಎಲ್ಲರಿಗೂ ಲಾಭವಾಗಲಿ ಎಂಬುದೇ ನನ್ನ ದೇಶಭಕ್ತಿ. ನನ್ನ ಕಲ್ಪನೆಯಿಂದ ಸ್ವತಂತ್ರ್ಯ ಭಾರತ ಜಗತ್ತಿಗೆ ಭಾದಕವಾಗದು"[೭]

-ಎಂದಿದ್ದಾರೆ.

ಭಾರತದ ಸ್ವಾತಂತ್ರ್ಯವನ್ನು ಆಪೇಕ್ಷಿಸುತ್ತಿದ್ದ ಗಾಂಧಿ ಅದರಿಂದ ಇತರ ದೇಶಗಳಿಗೆ ಶೋಷಣೆಯಾಗ ಬಾರದು. ಭಾರತದ ಸ್ವಾತಂತ್ರ್ಯ ಪ್ರಪಂಚದ ಜನರಿಗೆ ಒಳ್ಳೆಯದಾಗಿರಬೇಕು. ಜಗತ್ತಿನ ರಾಷ್ಟ್ರಗಳು ನಮ್ಮ ಸ್ವಾತಂತ್ರ್ಯ ಭಾವನೆಯನ್ನು ನೋಡಿಕೊಂಡು ಕಲಿತುಕೊಳ್ಳುತ್ತವೆ. ಇದರಿಂದ ಜಗತ್ತಿನಲ್ಲಿ ಮಾನವನ ಕಲ್ಯಾಣವಾಗುತ್ತದೆ ಎಂದು ಭಾವಿಸಿದ್ದರು. ಅಲ್ಲದೆ ಅವರು ಇತರ ದೇಶಗಳು ನಮ್ಮ ಮೇಲೆ ಆಕ್ರಮಣ ಮಾಡಿದರೆ ಅವರನ್ನು ಅಹಿಂಸೆಯ ಮೂಲಕ ವಿರೋಧಿಸಿ ಓಡಿಸಬಹುದು. ಈ ಅಹಿಂಸೆಯಿಂದ ಹೋರಾಟವನ್ನು ಆರಂಭಿಸಿದರೆ ಭಾರತೀಯರೆಲ್ಲರ ಬೆಂಬಲ ದೊರೆಯುತ್ತದೆ ಎಂಬ ವಿಶ್ವಾಸವಿಟ್ಟಿದ್ದರು. ಈ ತಂತ್ರಗಳನ್ನು ಬಳಿಸಿದ್ದರಿಂದಲೇ ಆಂಗ್ಲರ ವಿರುದ್ಧವಾಗಿ ಭಾರತವು ಸ್ವಾತಂತ್ರ್ಯ ಪಡೆಯಲು ಸಾಧ್ಯ ಆಗಿದ್ದು.

ಗಾಂಧಿ ಅವರು ಪ್ರಮುಖವಾಗಿ ಮಾನವನ ಒಳಿತಿಗಾಗಿ ಪ್ರತಿಯೊಬ್ಬರಲ್ಲೂ ಮಾನವೀಯತೆಯ ಭಾವನೆ ಇರಬೇಕು ಎಂದು ಭಾವಿಸಿದ್ದರು. ಇಂದು ಪ್ರತಿಯೊಂದು ರಾಷ್ಟ್ರವು ಈ ಮಾನವೀಯತೆಯ ಗುಣಗಳನ್ನು ಅಳವಡಿಸಿಕೊಳ್ಳುವುದು ಸೂಕ್ತ. ಇದರಿಂದ ಯಾರು ಯಾರನ್ನು ದ್ವೇಷದಿಂದ ನೋಡಲು ಸಾಧ್ಯವಿಲ್ಲ. ಅಲ್ಲದೆ ಪ್ರತಿಯೊಬ್ಬ ಮನುಷ್ಯನು ತಪ್ಪು ಮಾಡುವುದು ಸಹಜ. ಆದರೆ ಆ ತಪ್ಪನ್ನು ತಕ್ಷಣ ಅರಿತುಕೊಂಡು ಸರಿಪಡಿಸಿಕೊಳ್ಳಬೇಕಾಗಿದೆ. ಆಗ ಮಾತ್ರ ಜಗತ್ತಿನ ಸಮಾಜವು ನೆಮ್ಮದಿಯಿಂದ ಬದುಕಲು ಸಾಧ್ಯ. ಈ ಹಿನ್ನೆಲೆಯಲ್ಲಿ ಜಗತ್ತಿನ ರಾಷ್ಟ್ರಗಳು ಮಾನವಕಲ್ಯಾಣವೇ ಮುಖ್ಯವೆಂದು, ಮಾನವೀಯತೆಯ ಉಳಿವಿಗಾಗಿ ಅಹಿಂಸೆಯ ಮಾರ್ಗವನ್ನು ಅನುಸರಿಸುವುದು ಸೂಕ್ತ ಎಂಬ ಚಿಂತನೆ ನಡೆಸಿದ್ದರು.

ವಿಶ್ವೇಶ್ವರಯ್ಯ ಅವರು ದಾಸ್ಯ-ಸ್ವಾತಂತ್ರ್ಯದ ಬಗ್ಗೆ ಮುಕ್ತವಾಗಿ ಚರ್ಚಿಸಲಿಲ್ಲ. ಸ್ವಾತಂತ್ರ್ಯದ ಚಳವಳಿಯಲ್ಲಿಯೂ ಸಹ ನೇರವಾಗಿ ಭಾಗವಹಿಸಲಿಲ್ಲ. ಆದರೆ ದಾಸ್ಯ ಮತ್ತು ಸ್ವಾತಂತ್ರ್ಯದ ಬಗ್ಗೆ ಆಂಗ್ಲರ ವಿರುದ್ಧವಾಗಿ ತಮ್ಮದೇ ಆದ ರೀತಿಯಲ್ಲಿ ಹೋರಾಡಿದರು. ಗಾಂಧಿ ಅವರು ಸ್ವಾತಂತ್ರ್ಯದ ಕಲ್ಪನೆ ಇಟ್ಟುಕೊಂಡಂತೆ ವಿಶ್ವೇಶ್ವರಯ್ಯ ಅವರು ಇಟ್ಟುಕೊಂಡಿರಲಿಲ್ಲ. ಆದರೆ ಇವರು ವಿದೇಶಿ ವಿಚಾರಗಳಿಂದ ದೇಶದ ಸ್ವಾತಂತ್ರ್ಯದ ಬಗ್ಗೆ ಆಲೋಚಿಸುತ್ತಿದ್ದುಂಟು. ಅವರು ವಿದೇಶಗಳಲ್ಲಿನ ಪ್ರಜಾಪ್ರಭುತ್ವ ವ್ಯವಸ್ಥೆ ಇರಬೇಕೆಂದು ಬಯಸಿದವರು. ಭಾರತದಲ್ಲಿ ರಾಜಕೀಯ ಪಕ್ಷಗಳು ಕೇವಲ ಎರಡೇ ಇರಬೇಕು. ಆಗ ಮಾತ್ರ ದೇಶದ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂದು ಚಿಂತಿಸಿದವರು.

ವಿಶ್ವೇಶ್ವರಯ್ಯ ಅವರು ಮುಂಬಯಿ ಸರ್ಕಾರದಲ್ಲಿ ಇಂಜಿನಿಯರ್ ಆಗಿದ್ದವರು. ಆದರೆ ಅವರಲ್ಲಿದ್ದ ದಕ್ಷತೆ, ಬುದ್ಧಿವಂತಿಕೆ, ಅರ್ಹತೆ, ಪ್ರಮಾಣಿಕತೆಗಳಿಗೆ ಉದ್ಯೋಗದಲ್ಲಿ ಬಡ್ತಿಕೊಡಲು ಆಂಗ್ಲ ಸರ್ಕಾರ ನಿರಾಕರಿಸಿತ್ತು ಹೀಗಾಗಿ ಒಬ್ಬ ಭಾರತೀಯ ಮತ್ತು ಅರ್ಹತೆ ಇರುವ ವ್ಯಕ್ತಿಗೆ ಬಡ್ತಿ ದೊರೆಯದಿದ್ದಾಗ ರಾಜೀನಾಮೆಯನ್ನು ನೀಡಿ ಹೊರಬಂದರು.

ಮೈಸೂರು ಸಂಸ್ಥಾನದ ಆಹ್ವಾನದ ಮೇರೆಗೆ ತಮ್ಮ ತಾಯ್ನಾಡ ಸೇವೆ ಮಾಡಲು ಬಂದರು. ಮೈಸೂರು ಸಂಸ್ಥಾನದಲ್ಲಿ ಇಂಜಿನಿಯರಾಗಿ, ಅನಂತರ ದಿವಾನರಾಗಿ ನೇಮಕಗೊಂಡರು. ಇವರು ದಿವಾನರಾಗಿ ನೇಮಕಗೊಂಡಾಗ ಸಂಸ್ಥಾನದ ಮಹಾರಾಜರಿಗೆ ಸ್ವತಂತ್ರವಾಗಿ ಆಳ್ವಿಕೆ ನಡೆಸಲು ಅವಕಾಶವಿರಲಿಲ್ಲ. ಆಂಗ್ಲ ವಸಾಹತುಶಾಹಿಗಳು ಸಂಸ್ಥಾನದ ಆಂತರಿಕ ಆಡಳಿತದ ಮಧ್ಯೆ ಪ್ರವೇಶಿಸುತ್ತಿದ್ದರು. ಅಷ್ಟೇ ಅಲ್ಲದೆ ಕೆಲವೊಂದು ಅಭಿವೃದ್ಧಿ ಕಾರ್ಯಗಳಿಗೂ ಆಂಗ್ಲ ಸರ್ಕಾರವನ್ನು ಕೇಳಿ ತೀರ್ಮಾನ ಕೈಗೊಳ್ಳಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ವಿಶ್ವೇಶ್ವರಯ್ಯನವರಿಗೆ ಸರಿಕಾಣದೆ ಅದನ್ನು ವಿರೋಧಿಸಿ ಆಂತರಿಕ ಆಡಳಿತದ ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತಿದ್ದರು.

ಭಾರತದ ವೈಸ್‌ರಾಯ್ ಆದ ಲಾರ್ಡ್‌ಹಾರ್ಡಿಂಜ್‌ರು ೧೯೧೩ರಲ್ಲಿ ಮೈಸೂರು ಸಂಸ್ಥಾನಕ್ಕೆ ಭೇಟಿ ನೀಡಿದ್ದರು. ಇಂಥ ಸಮಯವನ್ನು ಬಳಸಿಕೊಂಡ ವಿಶ್ವೇಶ್ವರಯ್ಯ ಅವರು ಮಹಾರಾಜರು ಮತ್ತು ಹಾರ್ಡಿಂಜ್‌ರ ನಡುವೆ ಒಪ್ಪಂದವೊಂದಕ್ಕೆ ಸಹಿ ಹಾಕಲು ಕಾರಣರಾದರು.[೮] ಈ ಒಪ್ಪಂದದಿಂದಾಗಿ ಸಂಸ್ಥಾನದ ಆಂತರಿಕ ಆಡಳಿತ ಮತ್ತು ಅಭಿವೃದ್ಧಿಯಲ್ಲಿ ಹಸ್ತಕ್ಷೇಪ ಮಾಡಲುವುದಿಲ್ಲವೆಂದು ಹಾರ್ಡಿಂಜ್‌ರು ಭರವಸೆ ನೀಡಿದರು. ಹೀಗಾಗಿ ಸಂಸ್ಥಾನವು ಆಂತರಿಕ ಆಡಳಿತದಲ್ಲಿ ಸ್ವಾತಂತ್ರ್ಯ ಪಡೆಯಿತಲ್ಲದೆ ಮಹಾರಾಜರಿಗೂ ಹೆಚ್ಚಿನ ಅಧಿಕಾರ, ಸ್ಥಾನಮಾನಗಳು ದೊರೆತವು. ಇದಕ್ಕಾಗಿ ಮಹಾರಾಜರು ವಿಶ್ವೇಶ್ವರಯ್ಯ ಅವರನ್ನು ಅಭಿನಂದಿಸಿದರು.

ಬ್ರಿಟಿಷ್ ಸರ್ಕಾರವು ಭಾರತದಲ್ಲಿ ಜವಾಬ್ದಾರಿ ಸರ್ಕಾರವನ್ನು ತರಲು ೧೯೧೭ರಲ್ಲಿ ಘೋಷಣೆ ಮಾಡಿತು. ಹೀಗಾಗಿ ಇದನ್ನು ಚರ್ಚಿಸಲು ಭಾರತೀಯ ರಾಜರುಗಳು ಮತ್ತು ಮಂತ್ರಿ ಪರಿಷತ್ತಿನ

ಸದಸ್ಯರು ಬಿಕನೀರ್‌ನಲ್ಲಿ ಸಭೆ ಸೇರಿದರು.[೯] ಈ ಸಭೆಯಲ್ಲಿ ಬಿಕನೀರ್‌ನ ರಾಜ ಗಂಗಾಸಿಂಗ್ ಅಧ್ಯಕ್ಷರಾದರೆ, ವಿಶ್ವೇಶ್ವರಯ್ಯ ಅವರು ಕಾರ್ಯದರ್ಶಿಯಾಗಿದ್ದರು. ಆದರೆ ಸಭೆಯಲ್ಲಿ ನಡೆವ ಚರ್ಚೆಯಲ್ಲಿ ಯಾವುದೇ ರೀತಿಯಲ್ಲೂ ಒಮ್ಮತ ಅಭಿಪ್ರಾಯಕ್ಕೆ ಬರಲಿಲ್ಲ. ಹೀಗಾಗಿ ಆಂಗ್ಲ ಸರ್ಕಾರಕ್ಕೆ ಒಂದು ಮನವಿಯನ್ನು ವಿಶ್ವೇಶ್ವರಯ್ಯ ಅವರು ಬರೆದರು. ಅದರಲ್ಲಿ ಸಂಸ್ಥಾನಗಳಿಗೆ ಯಾವುದೇ ಕುಂದುಂಟಾಗದಂತೆ ಕೌನ್ಸಿಲ್ ಆಫ್ ಸ್ಟೇಟ್ಸ್‌ನ್ನು ಪ್ರತಿನಿಧಿಸುತ್ತೇವೆ ಎಂದು ಆಂಗ್ಲ ಸರ್ಕಾರಕ್ಕೆ ತಿಳಿಸಲಾಯಿತು. ಭಾರತದಲ್ಲಿ ಸಂಸ್ಥಾನಗಳು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬೇಕು ಎಂಬ ನಿಲುವು ಸಹ ಈ ಸಂದರ್ಭದಲ್ಲಿ ವ್ಯಕ್ತಪಡಿಸಿದ್ದುಂಟು.

ವಿಶ್ವೇಶ್ವರಯ್ಯ ಅವರಲ್ಲಿ ರಾಜಕಾರಣದ ಬಗ್ಗೆ ಹೆಚ್ಚಿನ ಆಸಕ್ತಿ ಇರಲಿಲ್ಲ. ಆದರೆ ಇವರು ಗಾಂಧಿಯವರಂತೆ ಅಹಿಂಸಾವಾದಿಯಾಗಿದ್ದರು. ಇದಕ್ಕೆ ಪ್ರಮುಖ ಕಾರಣ ಗೋಖಲೆ, ಮಾಳವೀಯ, ಜಿನ್ನಾರವರಂಥವರ ಸ್ನೇಹವನ್ನು ಸಂಪಾದಿಸಿದ್ದುದು. ಇವರು ರಾಷ್ಟ್ರೀಯಮಟ್ಟದ ರಾಜಕೀಯ ಸಮ್ಮೇಳನಗಳಲ್ಲಿ ಮಾತ್ರ ಭಾಗವಹಿಸಿದರು. ಮುಂಬಯಿಯಲ್ಲಿ ನಡೆದ ಸರ್ವಪಕ್ಷಗಳ ಸಮ್ಮೇಳನಗಳಲ್ಲಿ ವಿಶ್ವೇಶ್ವರಯ್ಯ ಅವರು ಭಾಗವಹಿಸಿದ್ದರು. ಈ ಸಮ್ಮೇಳನದಲ್ಲಿ ಅಧ್ಯಕ್ಷರಾದ ಸರ್ ಶಂಕರ್‌ನಾಯರ್ ರವರು ತಮ್ಮ ಅಧ್ಯಕ್ಷ ಸ್ಥಾನದಿಂದ ಹೊರಬಂದರು. ಹೀಗಾಗಿ ಸಮ್ಮೇಳನದ ಒಮ್ಮತ ಅಭಿಪ್ರಾಯಕ್ಕೆ 'ಒಗೂಟ್ಟು ಇವರೇ ಅಧ್ಯಕ್ಷರಾದರು.[೧೦] ಸಭೆಯಲ್ಲಿ ಆಂಗ್ಲರ ಸರ್ಕಾರದ ದೌರ್ಜನ್ಯಗಳನ್ನು ಖಂಡಿಸಿದರು. ಅಲ್ಲದೆ ಕೆಲವೊಂದು ನಿರ್ಣಯಗಳನ್ನು ಮಂಡಿಸಿದರು. ದೇಶದಲ್ಲಿ ಶಾಂತಿ ವಾತಾವರಣವನ್ನು ಸ್ಥಾಪಿಸಲು ರೌಲೆಟ್ ಮಸೂದೆಯನ್ನು ಹಿಂದಕ್ಕೆ ಪಡೆಯುವಂತೆ ಸಭೆಯಲ್ಲಿ ತೀರ್ಮಾನಿಸಲಾಯಿತು.

ವಿಶ್ವೇಶ್ವರಯ್ಯ ಅವರು ಆಂಗ್ಲರ ವಿರುದ್ಧ ಸ್ವಾತಂತ್ರ್ಯ ಹೋರಾಟಕ್ಕಾಗಿ, ನೇರವಾಗಿ ಭಾಗವಹಿಸ ದಿದ್ದರೂ ಕೆಲವೊಂದು ಸಂಸ್ಥಾನಗಳ ಆಂತರಿಕ ಸ್ವಾತಂತ್ರ್ಯ ಪಡೆಯಲು ಯಶಸ್ವಿಯಾಗಿದ್ದರು. ಒಟ್ಟಾರೆ ಅವರ ನಿಲುವುಗಳನ್ನು ಗಮನಿಸಿದರೆ ಭಾರತವು ಸ್ವಾತಂತ್ರ್ಯವನ್ನು ಪಡೆಯಬೇಕೆಂದರಲ್ಲಿ ಎರಡು ಮಾತಿರಲಿಲ್ಲ ಎಂದು ಹೇಳಬಹುದು. ಆದರೆ ಅದನ್ನು ಮುಕ್ತವಾಗಿ ಚರ್ಚಿಸಲಿಲ್ಲ. ಇವರು ಆಂಗ್ಲರಲ್ಲಿ ವಿಶ್ವಾಸವಿಟ್ಟಿದ್ದರಿಂದ ಗಾಂಧಿ ಅವರಂತೆ ಹಂತ ಹಂತವಾಗಿ ಸ್ವಾತಂತ್ರ್ಯಗಳಿಸುವುದರ ಜೊತೆಗೆ ಅಭಿವೃದ್ಧಿ ಹೊಂದಬೇಕು ಎಂಬ ಹಂಬಲವನ್ನು ಹೊಂದಿದ್ದರು ಎಂದು ಗುರುತಿಸಬಹುದು.

### ೫.೩. ರಾಷ್ಟ್ರ-ರಕ್ಷಣೆ

ಆಧುನಿಕ ಜಗತ್ತಿನಲ್ಲಿರುವ ಪ್ರತಿಯೊಂದು ರಾಷ್ಟ್ರವು ತನ್ನ ರಕ್ಷಣೆಗೆ ಹೆಚ್ಚಿನ ಗಮನ ಕೊಡುತ್ತಿದೆ. ಹೀಗಾಗಿ ಇಂದು ಮುಂದುವರೆಯುತ್ತಿರುವ ಮತ್ತು ಹಿಂದುಳಿದ ರಾಷ್ಟ್ರಗಳು ಬಡತನ, ನಿರುದ್ಯೋಗ

ಅನಕ್ಷರತೆಗಳಿಂದ ನರಳುತ್ತಿದ್ದರೂ ಸಹ ಆಯಾ ದೇಶದ ರಕ್ಷಣೆಯೇ ಪ್ರಧಾನವಾಗಿದೆ. ಬಜೆಟ್ ಮಂಡನೆಯಲ್ಲೂ ದೇಶದ ರಕ್ಷಣೆಯ ವಿಷಯದಲ್ಲಿ ಹೆಚ್ಚಿನ ಹಣವನ್ನು ಮೀಸಲಿಡುತ್ತಿವೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ರಾಷ್ಟ್ರವು ತನ್ನ ರಕ್ಷಣೆಗಾಗಿ ಆತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದುವುದೇ ಮುಖ್ಯವಾಗಿದೆ. ಇಂದು ಪ್ರಪಂಚದ ಮುಂದುವರೆದ, ಮುಂದುವರೆಯುತ್ತಿರುವ ರಾಷ್ಟ್ರಗಳಲ್ಲಿರುವ ಆತ್ಯಾಧುನಿಕ ಶಸ್ತ್ರಾಸ್ತ್ರಗಳು, ಇಡೀ ಮಾನವ ಜನಾಂಗವೇ ನಾಶವಾದರೂ ಸಹ ಅವುಗಳ ಪ್ರಮಾಣ ಮಾತ್ರ ಪೂರ್ತಿ ನಾಶ ಆಗುವುದಿಲ್ಲ. ಇಂದು ಇಡೀ ಮಾನವ ಜನಾಂಗವೇ ಭಯದ ನೆರಳಿನಲ್ಲಿ ಬದುಕುವ ಸ್ಥಿತಿಯನ್ನು ತಲುಪಿದೆ. ಅಲ್ಲದೆ ಭಾರತವು ಸಹ ಇಂದು ತನ್ನ ರಕ್ಷಣೆಗೆ ಬೇಕಾದ ಎಲ್ಲ ರೀತಿಯ ಆತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದುತ್ತಿದೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ರಕ್ಷಣೆಗಾಗಿ ಚಿಂತಿಸಿದವರಲ್ಲಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರೂ ಸಹ ಪ್ರಮುಖರು. ಹೀಗಾಗಿ ಇವರಿಬ್ಬರ ಚಿಂತನೆ, ಅಲೋಚನೆಗಳನ್ನು ಹಾಗೂ ಕೆಲಸಕಾರ್ಯಗಳನ್ನು ಪರಿಶೀಲಿಸಲಾಗಿದೆ.

ಗಾಂಧಿ ಮತ್ತು ವಿಶ್ವೇಶ್ವರಯ್ಯನವರು ಸಮಕಾಲೀನರಾದ್ದರಿಂದ ಪ್ರಪಂಚದಲ್ಲಿ ನಡೆದ ಎರಡು ಮಹಾಸಂಗ್ರಾಮಗಳನ್ನು ಅರಿತವರು. ಆದರಿಂದಾಗುವ ಅನುಕೂಲ ಮತ್ತು ಕೆಟ್ಟಪರಿಣಾಮಗಳನ್ನು ಚೆನ್ನಾಗಿ ಆಲೋಚಿಸಿದ್ದರು. ಇವರಿಬ್ಬರಲ್ಲಿ ದೇಶದ ರಕ್ಷಣೆಯನ್ನು ಕುರಿತಂತೆ ಭಿನ್ನಾಭಿಪ್ರಾಯಗಳು ಇದ್ದುದನ್ನು ಗುರುತಿಸಬಹುದು.

ವಿಶ್ವೇಶ್ವರಯ್ಯ ಅವರು ದಿವಾನರಾಗಿದ್ದ ಸಮಯದಲ್ಲಿ ಪ್ರಾರಂಭವಾದ ಮೊದಲನೆಯ ಮಹಾಯುದ್ಧಕ್ಕಾಗಿ ಆಂಗ್ಲರಿಗೆ ಸಂಸ್ಥಾನದಿಂದ ಧನಸಹಾಯ ಮತ್ತು ಸೈನ್ಯ ಸಹಾಯವನ್ನು ನೀಡಿದ್ದರು. ವಿದೇಶಗಳಿಂದ ಪ್ರಭಾವಿತರಾಗಿದ್ದ ಇವರು ಅಂದೇ ಪಾಶ್ಚಾತ್ಯದೇಶಗಳು ಆತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ತಯಾರಿಸುತ್ತಿರುವುದನ್ನು ಕಂಡಿದ್ದರು. ಸಾಮಾನ್ಯವಾಗಿ ಇಂಜಿನಿಯರಾಗಿದ್ದ ಇವರಲ್ಲಿ ವಿಜ್ಞಾನ-ತಂತ್ರಜ್ಞಾನಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಿದ್ದರು. ಭಾರತದ ರಕ್ಷಣೆಯ ವಿಷಯದಲ್ಲಿ ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಹೊಂದುವುದು ಸೂಕ್ತವೆಂದು ಚಿಂತಿಸುತ್ತಿದುದ್ದುಂಟು. ಇವರಲ್ಲಿದ್ದ ಕೌಶಲ್ಯ-ತಂತ್ರಜ್ಞಾನಗಳಿಂದ ದೇಶದಲ್ಲಿ ಮೋಟಾರು ವಾಹನಗಳ ಕಾರ್ಖಾನೆಯನ್ನು ಸ್ಥಾಪಿಸಲು ಪ್ರಯತ್ನಿಸಿದಾಗ ಅದಕ್ಕೆ ಆಂಗ್ಲರು ವಿರೋಧಿಸಿದರು. ಆದರೆ ಆಂಗ್ಲರು ಎರಡನೆ ಮಹಾ ಸಂಗ್ರಾಮದಲ್ಲಿ ಸೋಲುವ ಭೀತಿಯಲ್ಲಿದ್ದರು. ಹಿಂದಿನಿಂದಲೂ ಹೀರಾಚಂದ್ ಮತ್ತು ಅದ್ವಾನಿಯವರು ಆಟೋಮೊಬೈಲ್ ಕಾರ್ಖಾನೆಯ ಸ್ಥಾಪನೆಗೆ ಪ್ರಯತ್ನಿಸುತ್ತಿದ್ದರು. ಇಂಥ ಸಮಯದಲ್ಲಿ ಕಾರ್ಖಾನೆಯನ್ನು ಸ್ಥಾಪಿಸಲು ಅವರಿಗೆ ಆಂಗ್ಲರು ಅನುಮತಿ ನೀಡಿದ್ದರಿಂದ, ವಿಶ್ವೇಶ್ವರಯ್ಯ ಅವರು ಬೆಂಗಳೂರಿನಲ್ಲೇ ಸ್ಥಾಪಿಸಿಲು ಕಾರಣರಾದರು. ಹೀಗಾಗಿ ಈ ಕಾರ್ಖಾನೆಯು ಆತ್ಯಾಧುನಿಕ ವಿಮಾನ ಗಾಲಿಗಳನ್ನು ತಯಾರಿಸಲು ಪ್ರಖ್ಯಾತವಾಗಿದೆ. ಇಂದು ಈ ಕಾರ್ಖಾನೆಯ ಜವಾಬ್ದಾರಿಯು ಕೇಂದ್ರ ಸರ್ಕಾರದಡಿ ಯಲ್ಲಿದ್ದು ಹೆಚ್ಚಿನ ಪ್ರಗತಿ ಸಾಧಿಸುತ್ತಿದೆ.

ಗಾಂಧಿ ಅವರು ದಕ್ಷಿಣ ಆಫ್ರಿಕಾದಲ್ಲಿದ್ದಾಗ, ಬೋಯರ್ ಯುದ್ಧದ ಸಮಯದಲ್ಲಿ, ಸ್ವಯಂ ಸೇವಕರಾಗಿ ಯುದ್ಧ ಭೂಮಿಯಲ್ಲಿ ಅಪಾರ ಸಾವು ನೋವುಗಳನ್ನು ಕಂಡಿದ್ದವರು. ಅಲ್ಲದೆ ಇವರು ಮೊದಲನೆಯ ಮಹಾಯುದ್ಧದ ಸಮಯದಲ್ಲಿ ಆಂಗ್ಲರಿಗೆ ಸಹಾಯವನ್ನೂ ನೀಡಿದವರು. ತದನಂತರವಲ್ಲಿ ಈ ಸಾವು ನೋವುಗಳಿಂದ ಮತ್ತು ಕೆಲವು ಗ್ರಂಥಗಳಿಂದ ಪ್ರಭಾವಿತರಾಗಿ ತಮ್ಮ ಮನಸ್ಸನ್ನು ಅಹಿಂಸೆಯ ಮಾರ್ಗದ ಕಡೆಗೆ ಪರಿವರ್ತಿಸಿಕೊಂಡರು. ಎರಡನೆಯ ಮಹಾಸಂಗ್ರಾಮದಲ್ಲಿ ಅಮೇರಿಕಾವು ಜಪಾನಿನ ಹಿರೋಷಿಮಾ ಮತ್ತು ನಾಗಸಾಕಿ ಪ್ರದೇಶಗಳ ಮೇಲೆ ಅಣುಬಾಂಬನ್ನು ಹಾಕಿತು. ಇದರಿಂದ ಅಪಾರ ಸಾವು ನೋವುಗಳು ಸಂಭವಿಸಿದವು. ಈ ಹಿನ್ನೆಲೆಯಲ್ಲಿ ಗಾಂಧಿಯವರು ಅಣುಬಾಂಬಿನ ಯುದ್ಧದ ಬಗ್ಗೆ-

> "ಈಗ ಉಳಿದಿರುವುದು ಅಹಿಂಸೆಯೊಂದೇ. ಅಣುಬಾಂಬು ನಾಶ ಮಾಡಲಾರದ ವಸ್ತು ಅದೊಂದೇ. ಅಣುಬಾಂಬು ಹಿರೋಷಿಮಾವನ್ನು ಧ್ವಂಸಮಾಡಿಹಾಕಿತು ಎಂದು ಕೇಳಿದಾಗ ನನ್ನ ಮೈಯ ಒಂದು ಕಂಡವೂ ಕದಲಿಲ್ಲ. ಅದಕ್ಕೆ ಪ್ರತಿಯಾಗಿ ಹೀಗೆಂದುಕೊಂಡೆ; ಜಗತ್ತು ಈಗ ಅಹಿಂಸೆಯನ್ನು ಅವಲಂಭಿಸದೆ ಇದ್ದರೆ ಮಾನವ ಜಾತಿಯ ಆತ್ಮಹತ್ಯೆ ಖಂಡಿತ"[೧೧]

-ಎಂದು ಪ್ರತಿಕ್ರಿಯೆ ನೀಡಿದರು.

ವಿಶ್ವೇಶ್ವರಯ್ಯ ಅವರು ಮುಂದುವರೆದ ರಾಷ್ಟ್ರಗಳನ್ನು ಅನುಸರಿಸಿ, ಭಾರತವು ಸಹ ಮುಂದುವರೆಯ ಬೇಕು ಎಂಬ ಅಭಿಲಾಷೆ ಹೊಂದಿದ್ದರು. ಅವರು ಬೇರೆ ಬೇರೆ ರಾಷ್ಟ್ರಗಳು ಯಾವರೀತಿ ಪ್ರತಿಕ್ರಿಯಿಸುತ್ತಿವೆ ಎಂಬುದನ್ನು-

> "ರಾಷ್ಟ್ರಗಳು ತಮ್ಮ ಸ್ವಬಲದಿಂದ ಬೆಳೆಯುತ್ತಿವೆ. ಯಾವುದೇ ರಾಷ್ಟ್ರವೂ ಮತ್ತೊಂದು ರಾಷ್ಟ್ರದ ಆಗುಹೋಗುಗಳನ್ನು ರೂಪಿಸಲಾರವು. ಭಾರತವು ಯಾವರೀತಿಯಲ್ಲಿ ದಕ್ಷರಾಷ್ಟ್ರ ವಾದಿತೆಂದು ಅನ್ಯರಾಷ್ಟ್ರಗಳು ಪಾಠ ಹೇಳಿಕೊಡಲಾರವು"[೧೨]

-ಎನ್ನುವುದರ ಮೂಲಕ ಪ್ರತಿಕ್ರಿಯಿಸಿದ್ದಾರೆ. ಅವರು ಹೇಳಿರುವುದು ಸತ್ಯಕ್ಕೆ ಪೂರಕದ ಅಂಶ. ಇಂದು ಯಾವುದೇ ಒಂದು ರಾಷ್ಟ್ರವೂ ತಾವು ಕಂಡುಹಿಡಿದ ಫಾರ್ಮುಲಾಗಳನ್ನು ಬೇರೊಂದು ರಾಷ್ಟ್ರಗಳಿಗೆ ಹೇಳುವುದಿಲ್ಲ. ಏಕೆಂದರೆ ಅದನ್ನು ಬಳಸಿಕೊಂಡು ನಮಗಿಂತ ಪ್ರಬಲರಾಗುತ್ತಾರೆಂಬ ಭಯ. ಹೀಗಾಗಿ ಭಾರತವು ತನ್ನದೇ ಆದ ತಂತ್ರಜ್ಞಾನ, ವಿಜ್ಞಾನಗಳನ್ನು ಬಳಸಿಕೊಂಡು ಅತ್ಯಾಧುನಿಕ ರೀತಿಯಲ್ಲಿ ಈ ಫಾರ್ಮುಲಾಗಳನ್ನು ಕಂಡುಹಿಡಿಯುವುದು ಸೂಕ್ತ ಎನ್ನುವ ರೀತಿಯಲ್ಲಿ ಹೇಳುತ್ತಿದ್ದುದುಂಟು. ಇಂದು ಅಮೇರಿಕಾವು ಪ್ರಪಂಚದಲ್ಲೇ ಹಿರಿಯಣ್ಣನಂತೆ ವರ್ತಿಸುತ್ತಿದೆ. ಆದರೆ ಒಂದು ಕಾಲದಲ್ಲಿ ಅದು ಭಾರತಕ್ಕೆ ಅಣುಬಾಂಬು ಮತ್ತು ಕಂಪ್ಯೂಟರ್ (ಸೂಪರ್‌ಕಂಪ್ಯೂಟರ್) ಫಾರ್ಮುಲಾಗಳನ್ನು ಕೊಡಲು ನಿರಾಕರಿಸಿತ್ತು. ಹೀಗಾಗಿ ಭಾರತವು ಅವೆರಡನ್ನು ತನ್ನ ಸ್ವದೇಶಿ ನೆಲೆಯಿಂದಲೇ ಕಂಡುಹಿಡಿದು ಪ್ರಪಂಚಕ್ಕೆ ತೋರಿಸಿಕೊಟ್ಟಿತು. ಇಂದು ಪ್ರಪಂಚದಲ್ಲೇ ಕಂಪ್ಯೂಟರ್ ಜ್ಞಾನದಲ್ಲಿ ಹೆಚ್ಚಿನ ಪ್ರಗತಿಯನ್ನು ಭಾರತವು ಸಾಧಿಸುತ್ತಿದೆ. ಈ ಹಿನ್ನೆಲೆಯಲ್ಲಿ ಭಾರತವು ಅಭಿವೃದ್ಧಿ ಹೊಂದಬೇಕೆಂದು ವಿಶ್ವೇಶ್ವರಯ್ಯ ಅವರು ಅಂದೇ ಚಿಂತಿಸಿದ್ದರು.

ಗಾಂಧಿ ಅಹಿಂಸಾ ನೀತಿಯ ಪ್ರವಾದಿಯೆಂದು ಹೇಳಬಹುದು. ಇವರು ಅಹಿಂಸಾ ನೀತಿಯನ್ನು ಅನುಸರಿಸಲು ಜಗತ್ತಿಗೆ ಸಾರಿದವರು. ಅವರು ವಿಜ್ಞಾನ-ತಂತ್ರಜ್ಞಾನವನ್ನು ವಿರೋಧಿಸುತ್ತಿದುದ್ದುಂಟು. ಅದರಿಂದ ಮಾನವನಿಗೆ ಒಳ್ಳೆಯದಾಗುವುದಕ್ಕಿಂತ ಅಪಾಯವೇ ಹೆಚ್ಚು ಎಂದು ತಿಳಿದುಕೊಂಡಿದ್ದವರು. ಈ ಆಧುನಿಕ ಯುಗದಲ್ಲೇ ಅಣುಬಾಂಬುವಿನಿಂದ ಆಗುವ ಅಪಾಯಗಳೇ ಹೆಚ್ಚು ಎಂಬುದರ ಬಗ್ಗೆ ಗಾಂಧಿ ಅವರು-

> “ಅಣುಬಾಂಬಿನ ಈ ಯುಗದಲ್ಲಿ ಹಿಂಸೆಯ ಸಕಲೋಪಾಯಗಳನ್ನೂ ನಿಸ್ತೇಜನ ಗೊಳಿಸಬಲ್ಲದ್ದು ಶುದ್ಧ ಅಹಿಂಸೆಯೊಂದೇ; ಧೈರ್ಯದಿಂದ ಹೇಳುತ್ತೇನೆ. ಯುದ್ಧ ವಿಜ್ಞಾನ-ರಣಕೇಳಿಗಳ ದಿವಾಳಿಯದುರಂತ ಅದರ ತವರಿನಲ್ಲೇ ನಡೆಯುತ್ತಿದೆ. ಕಣ್ಣಾರೆ ನೋಡುತ್ತಿದ್ದೇವೆ”[೩]

-ಎಂದು ಹೇಳಿದ್ದಾರೆ. ಪ್ರಸ್ತುತ ಪರಿಸ್ಥಿತಿಯಲ್ಲಿರುವ ಸಮಸ್ಯೆಗಳಲ್ಲಿ ಅಣುಬಾಂಬ್ ಸಹ ಒಂದು. ಈ ಅಣುಬಾಂಬಿನಿಂದ ಯಾವುದೇ ಒಂದು ಪ್ರಾಣಿಯು ಸಹ ಉಳಿಯದು. ಈ ಅಣುಬಾಂಬಿನ ಯುಗದಲ್ಲಿ ಮಾನವನು ಉಳಿಯುತ್ತಾನೆ ಎಂದು ಹೇಳುವುದು ತುಂಬ ಕಷ್ಟದ ವಿಷಯ. ಹೀಗಾಗಿ ಇಂದು ಅಹಿಂಸೆಯ ನೀತಿಯನ್ನು ಅನುಸರಿಸುವುದು ಸೂಕ್ತ. ಹೀಗಾದರೆ ಮಾತ್ರ ಮಾನವನು ನೆಮ್ಮದಿಯ ಜೀವನ ನಡೆಸಲು ಸಾಧ್ಯ. ಪ್ರಪಂಚದಲ್ಲಿ ಹೆಚ್ಚು ಅಣುಬಾಂಬನ್ನು ಅಮೇರಿಕಾ, ರಷ್ಯ, ಇಂಗ್ಲೇಡ್ ಇನ್ನು ಮುಂತಾದ ರಾಷ್ಟ್ರಗಳು ಹೊಂದಿವೆ. ಇವು ಹೊಂದಿರುವ ಅಣುಬಾಂಬನ್ನು ಉಪಯೋಗಿಸಿದರೆ ಇಡೀ ಮಾನವನ ಜನಾಂಗವೇ ನಾಶವಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಒಪ್ಪಂದ ಮಾಡಿಕೊಂಡು ಅವುಗಳನ್ನು ನಾಶಪಡಿಸಲು ಪ್ರಯತ್ನಿಸುತ್ತಿವೆ. ಆದರೂ ಭಯ ತಪ್ಪಿದ್ದಲ್ಲ.

ಗಾಂಧಿ ಅವರು ಭಾರತವು ಯುದ್ಧೋಪಕರಣಗಳನ್ನು ಹೊಂದುವುದಕ್ಕೆ ವಿರೋಧಿಸುತ್ತಿದ್ದುದುಂಟು. ಅವುಗಳು ಭಾರತಕ್ಕೆ ಅನಾವಶ್ಯಕ, ಬದಲಾಗಿ ಭಾರತವು ಸತ್ಯ-ಅಹಿಂಸೆ ಸತ್ಯಾಗ್ರಹಗಳನ್ನು ಅನುಸರಿಸಬೇಕು. ಈ ತತ್ತ್ವಗಳನ್ನು ಭಾರತವು ಅನುಸರಿಸುವುದರಿಂದ ಮಾನವ ಕಲ್ಯಾಣವಾಗುತ್ತದೆ. ಏಕೆಂದರೆ ಈ ಮಾದರಿಯನ್ನು ಜಗತ್ತಿನ ರಾಷ್ಟ್ರಗಳು ನೋಡಿ ಅನುಸರಿಸುತ್ತದೆ. ಇದರಿಂದ ಜಗತ್ತಿನಲ್ಲಿರುವ ಮಾನವ ಜನಾಂಗವು ನೆಮ್ಮದಿಯಿಂದ ಜೀವನ ನಡೆಸಲು ಸಾಧ್ಯ. ಆಗ ಮಾತ್ರ ಯಾರು ಭಯ ಪಡುವ ಪರಿಸ್ಥಿತಿ ಇರುವುದಿಲ್ಲ. ಗಾಂಧಿ ಅವರು ಜಗತ್ತಿನ ಕಲ್ಯಾಣವನ್ನು ಅಹಿಂಸಾ ನೆಲೆಯಿಂದ ನೋಡ ಬಯಸಿದವರು.

ವಿಶ್ವೇಶ್ವರಯ್ಯ ಅವರು ಭಾರತವು ಅನ್ಯರಾಷ್ಟ್ರಗಳಿಂದ ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಆಮದು ಮಾಡಿಕೊಳ್ಳುವುದನ್ನು ವಿರೋಧಿಸುತ್ತಿದ್ದರು. ಆದರೆ ಸ್ವದೇಶದಲ್ಲಿಯೇ ಕಾರ್ಖಾನೆಗಳನ್ನು ಸ್ಥಾಪಿಸಿ ಯುದ್ಧೋಪಕರಣಗಳನ್ನೇ ತಯಾರು ಮಾಡಬೇಕು ಎಂದು ವಾದಿಸುತ್ತಿದ್ದರು. ಇದಕ್ಕಾಗಿ ಸಂಶೋಧನೆಯನ್ನು ಕೈಗೊಳ್ಳುವುದು ಸೂಕ್ತ ಎಂದಿದ್ದರು. ಭಾರತವು ಆಧುನಿಕ ಸೈನ್ಯ ಬಲವನ್ನು ಹೊಂದಿರಬೇಕು ಆಗ ಮಾತ್ರ ಈ ಆಧುನಿಕ ಜಗತ್ತಿನಲ್ಲಿ ಶತ್ರುಗಳನ್ನು ಹಿಮ್ಮೆಟ್ಟಿಸಲು ಸಾಧ್ಯ. ಅಲ್ಲದೆ

ಭಾರತವು ದೊಡ್ಡ ಜಹಜು, ಸಮರ ನೌಕೆ, ಜಲಾಂತರ್ಗಾಮಿ ನೌಕೆ, ಯುದ್ಧ ವಿಮಾನ, ಟ್ಯಾಂಕರ್, ಕ್ಷಿಪಣಿ, ಫಿರಂಗಿ, ಮದ್ದುಗುಂಡುಗಳನ್ನು ಹೊಂದುವುದು ಸೂಕ್ತವೆಂದು ಚಿಂತಿಸಿದವರು. ವಿಶ್ವೇಶ್ವರಯ್ಯ ಅವರು ದೇಶದಲ್ಲಿ ಕಡ್ಡಾಯವಾಗಿ ಶಾಲೆಗಳಲ್ಲಿ ಮಿಲಿಟರಿ ಶಿಕ್ಷಣಕ್ಕೆ ಆದ್ಯತೆ ಕೊಡಬೇಕು ಎಂದು ಹೇಳುತ್ತಿದ್ದರು. ಅಲ್ಲದೆ ಅಧೀನದಲ್ಲಿದ್ದಾಗ ಭಾರತವು ಸುಭದ್ರವಾಗಿತ್ತು. ಆದರೆ ಇಂದು ಸ್ವಾತಂತ್ರ್ಯವಾಗಿರುವುದರಿಂದ ದೇಶದ ರಕ್ಷಣೆ ನಮ್ಮ ಮೇಲಿದೆ. ಹೀಗಾಗಿ ಪ್ರಬಲ ರಾಷ್ಟ್ರಗಳ ಎದುರಿನಲ್ಲಿ, ನಾವು ಎಲ್ಲ ರೀತಿಯಲ್ಲೂ ಸಜ್ಜಾಗಿರಬೇಕು ಎನ್ನುತ್ತಿದ್ದರು.[೧೪]

ಈ ರೀತಿಯಾಗಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ದೇಶದ ರಕ್ಷಣೆಯ ಬಗ್ಗೆ ಚಿಂತಿಸಿದರು. ಅಂದು ಚಿಂತಿಸಿದ ಚಿಂತನೆಗಳು, ಆಲೋಚನೆಗಳು ಇಂದು ಹೆಚ್ಚು ಪ್ರಸ್ತುತವಾಗುತ್ತಿವೆ.

**ಟಿಪ್ಪಣಿಗಳು**

೧. ಗೋವಿಂದರಾಜು ಸಿ.ಆರ್.,(೧೯೯೫), **ಕನ್ನಡ-ಕರ್ನಾಟಕತ್ವ**, ಪು.೨.

೨. ನರಸಿಂಹಸ್ವಾಮಿ ಕೆ.ಎಸ್.,(೧೯೬೧), **ನನ್ನ ಕನಸಿನ ಭಾರತ**, ಪು.೧೧.

೩. ನರಸಿಂಹಸ್ವಾಮಿ ಕೆ.ಎಸ್.,(೧೯೬೧), ಅದೇ, ಪು.೧೧.

೪. ಯಾಮುನಾಚಾರ್ಯ ಎಂ.(ಸಂ), (೧೯೬೧), **ಸಂಭಾಷಣೆ**, ಪು.೭೬.

೫. ಯಾಮುನಾಚಾರ್ಯ ಎಂ.(ಸಂ), (೧೯೬೧), **ಸಂಭಾಷಣೆ**, ಪು.೮೦.

೬. ಯಾಮುನಾಚಾರ್ಯ ಎಂ.(ಸಂ), (೧೯೬೧), **ರಾಜನೀತಿ**, ಪು.೫೩.

೭. ಯಾಮುನಾಚಾರ್ಯ ಎಂ.(ಸಂ), (೧೯೬೧), **ರಾಜನೀತಿ**, ಪು.೪೦.

೮. ಜಯಪ್ಪಗೌಡ ಡಿ.ಎಸ್.,(೧೯೯೪), **ದಿವಾನ್ ಸರ್.ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು**, ಪು.೩೭-೩೮.

೯. ಜಯಪ್ಪಗೌಡ ಡಿ.ಎಸ್.,(೧೯೯೪), ಅದೇ, ಪು.೩೯.

೧೦. ನಾರಾಯಣರಾವ್ ವಿ.ಎಸ್.,(೧೯೫೩), **ಮೋಕ್ಷಗುಂಡಂ. ವಿಶ್ವೇಶ್ವರಯ್ಯ**, ಪು.೧೧೨.

೧೧. ಯಾಮುನಾಚಾರ್ಯ ಎಂ.(ಸಂ),(೧೯೬೧), **ಸಂಭಾಷಣೆ**, ಪು. ೧೮೨.

೧೨. ನಾರಾಯಣರಾವ್ ವಿ.ಎಸ್.,(೧೯೭೮), **ಮೋಕ್ಷಗುಂಡಂ ವಿಶ್ವೇಶ್ವರಯ್ಯ**, ಪು.೨೯೧.

೧೩. ಯಾಮುನಾಚಾರ್ಯ ಎಂ.(ಸಂ), (೧೯೬೧), **ಸಂಭಾಷಣೆ**, ಪು. ೧೪೦.

೧೪. ದೊರೆಸ್ವಾಮಿ ಹೆಚ್.ಎಸ್.(ಸಂ), (೧೯೫೦), **ಪೌರವಾಣಿ**, ಸಂ.೯. ಸಂ.೩೪೮, ಕ.ರಾ.ಪತ್ರಾಗಾರ.

ಪ್ರಪಂಚದಲ್ಲಿ ಇಂದು ಹೆಚ್ಚು ಚರ್ಚೆಗೆ ಗ್ರಾಸವಾಗಿರುವ ವಿಷಯವೇ 'ಜಾಗತೀಕರಣ' ಎಂಬ ಪರಿಕಲ್ಪನೆ. ಈ ಪರಿಕಲ್ಪನೆಯು ಇತ್ತೀಚಿನ ವರ್ಷಗಳಲ್ಲಿ ಪ್ರಪಂಚದ ಎಲ್ಲ ಕಡೆ ವ್ಯಾಪಕವಾಗಿ ಹರಡಿಕೊಂಡಿದೆ. ಇದಕ್ಕೆ ಹಿಂದುಳಿದ ದೇಶ, ಮುಂದುವರೆಯುತ್ತಿರುವ ದೇಶ ಮತ್ತು ಮುಂದುವರೆದ ದೇಶ ಎಂಬ ವ್ಯತ್ಯಾಸಗಳೇನು ಇಲ್ಲ. ಇದು ಎಲ್ಲ ರಾಷ್ಟ್ರಗಳನ್ನು ತನ್ನ ಪ್ರಕ್ರಿಯೆಯೊಳಗೆ ಸೇರಿಸಿಕೊಂಡು ಮುಂದುವರೆಯುತ್ತಿದೆ.

೧೯೬೦ರಲ್ಲಿ ಜಾಗತೀಕರಣ ಎಂಬ ಪರಿಕಲ್ಪನೆಯನ್ನು ಮೊಟ್ಟಮೊದಲು ಬಳಸಿದವರು ಅಮೇರಿಕಾದ ಸಮಾಜ ವಿಜ್ಞಾನಿಯಾದ ಮಾರ್ಷಲ್ ಮೆಕ್‌ಮೊಹನ್. ಇವರು ಮಾಹಿತಿ ತಂತ್ರಜ್ಞಾನದ ವೇಗ ಮತ್ತು ವೈಜ್ಞಾನಿಕ ಪ್ರಗತಿಯಿಂದ ಮಾತ್ರ ಪ್ರಪಂಚದ ಎಲ್ಲ ಕಡೆಯು ತಲುಪಲು ಸಾಧ್ಯ ಆಗುತ್ತದೆ ಎಂಬ ವಾದವನ್ನು ಮಂಡಿಸಿದರು. ಇಡೀ ಜಗತ್ತೇ ಒಂದು ವಿಶಾಲವಾದ ಹಳ್ಳಿ ಎಂಬುದು ಇವರ ಪ್ರತಿಪಾದನೆ.[೧] ಹೀಗೆ ಅವರು ಪ್ರತಿಪಾದಿಸಲು ಹಲವು ಕಾರಣಗಳಿವೆ. ಪ್ರಮುಖವಾಗಿ ಅಮೇರಿಕಾವು ಒಂದು ವಲಸೆ ನಾಡು. ಅಲ್ಲದೇ ವಿವಿಧ ಜನಾಂಗಗಳ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳ ತಾಣ. ಆದ್ದರಿಂದ ಅವರೆಲ್ಲರೂ ಕೂಡಿಬಾಳಬೇಕೆಂಬ ಪ್ರಜ್ಞೆಯನ್ನು ಮೂಡಿಸುವುದೇ ಈ ಜಾಗತೀಕರಣದ ಪ್ರಮುಖ ಉದ್ದೇಶ ಎಂದರೆ ತಪ್ಪಿಲ್ಲ.

ಜಾಗತೀಕರಣ ಎಂಬ ಪದಕ್ಕೆ ನಿರ್ದಿಷ್ಟವಾದ ವ್ಯಾಖ್ಯೆ, ಅರ್ಥಗಳನ್ನು ಕೊಡಲು ಸಾಧ್ಯವಿಲ್ಲ. ಆದ್ದರಿಂದ ಈ ಪರಿಕಲ್ಪನೆಗೆ ಸದೃಢತೆ, ಬಲಿಷ್ಠತೆ, ವಿಶ್ವಪ್ರಜ್ಞೆ, ಹೊಸತನ, ಸಮಷ್ಟಿ ಹಾಗೂ ಎಲ್ಲವೂ ಒಂದೇ ಎಂಬ ಅರ್ಥವಿವರಣೆಗಳನ್ನು ಕಾಣಬಹುದು.[೨]

ಆಧುನಿಕತೆಯ ಹೊಸ ಪರಿಕಲ್ಪನೆಯೇ ಜಾಗತೀಕರಣ. ಆಧುನಿಕತೆಯು ಎಲ್ಲರಿಗೂ ಶಿಕ್ಷಣ ಕೊಡುವುದು, ಎಲ್ಲರಿಗೂ ಉದ್ಯೋಗ ಕಲ್ಪಿಸಿಕೊಡುವುದು. ಉತ್ಪಾದನೆಯಲ್ಲಿ ಜವಾಬ್ದಾರಿ ಮತ್ತು ಪಾಲುದಾರಿಕೆ ಕೊಡುವುದು ಎಲ್ಲ ಮಾನವನ ಚಟುವಟಿಕೆಗಳಿಗೆ ಸಮಾನತೆ ಮತ್ತು ಉತ್ತೇಜನ ಕೊಡುವುದು ಇದರ ಪ್ರಮುಖ ಧ್ಯೇಯವಾಗಿದೆ.[೩]

ಈ ಜಾಗತೀಕರಣದ ಪ್ರಕ್ರಿಯೆಯಲ್ಲಿ ಪ್ರಮುಖವಾಗಿ ಪ್ರಪಂಚದ ಎಲ್ಲ ಜನಾಂಗಗಳ ಅಂತರವನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ತಾಂತ್ರಿಕವಾಗಿ ಒಂದೇ ಎಂದು ಬಿಂಬಿಸುವುದು

ಪ್ರಧಾನ. ಅಂತೆಯೇ ವಿಶ್ವದ ಎಲ್ಲ ಜಗೆಯ ರಾಜಕೀಯ ಭಿನ್ನಾಭಿಪ್ರಾಯಗಳನ್ನು ತೊಡೆದು ಹಾಕುವುದು. ಎಲ್ಲ ರಾಷ್ಟ್ರಗಳು ಸ್ನೇಹ ಮತ್ತು ಭ್ರಾತೃತ್ವಗಳಿಂದ ಮುನ್ನಡೆಯುವುದನ್ನು ಬಯಸುತ್ತದೆ.[೪]

ಜಾಗತೀಕರಣದಿಂದ ಉಂಟಾಗಿರುವ ಹೊಸ ಆವಿಷ್ಕಾರಗಳನ್ನು ಸಮರ್ಥ್ಯವಾಗಿ ಬಳಸಿಕೊಳ್ಳಲಾಗುತ್ತಿದೆ. ಆಧುನಿಕತೆಯ ತಂತ್ರಜ್ಞಾನವನ್ನು ಕೃಷಿ, ಕೈಗಾರಿಕೆ ಮತ್ತು ಎಲ್ಲ ಕ್ಷೇತ್ರಗಳಲ್ಲಿಯು ಅಳವಡಿಸಿಕೊಂಡು ಆರ್ಥಿಕ ಅಭಿವೃದ್ಧಿ ಹೊಂದುವುದು. ಆಧುನಿಕ ಜೀವನದ ಶೈಲಿಯನ್ನು, ಎಲ್ಲರಲ್ಲೂ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಿಕೊಂಡು ಹೋಗುವುದು ಇದರ ಉದ್ದೇಶ. ಇದರಿಂದ ಎಲ್ಲ ರಾಷ್ಟ್ರಗಳು ಸಂವೃದ್ಧಿಯಾಗಿ ಪ್ರಗತಿಹೊಂದಿ ವಿಭಿನ್ನ ಸಾಂಸ್ಕೃತಿಕತೆಯನ್ನು ಮೈಗೂಡಿಸಿಕೊಳ್ಳುವಂತೆ ಆಗುತ್ತದೆ ಎಂಬ ಅಭಿಪ್ರಾಯ ಇದೆ. ಮಾಹಿತಿ-ತಂತ್ರಜ್ಞಾನಗಳ ಸಂಪರ್ಕದಿಂದಾಗಿ ಪ್ರಪಂಚವು ದಿನೇ ದಿನೇ ಚಿಕ್ಕದಾಗುತ್ತಿದೆ. ಈ ಮಾಹಿತಿ ತಂತ್ರಜ್ಞಾನದಿಂದಾಗಿ ಪ್ರಪಂಚದ ಯಾವುದೇ ಮೂಲೆಗಳಿಗೆ ಕ್ಷಣ ಮಾತ್ರದಲ್ಲಿ ಸಂಪರ್ಕವನ್ನು ಪಡೆಯಲು ಸಾಧ್ಯ. ಇದರ ಬಳಕೆಯಿಂದ ಜಗತ್ತಿನ ಎಲ್ಲದೇಶಗಳು ಪ್ರಗತಿ ಹೊಂದಲು ಹಾತೊರೆದಿವೆ.

ಜಾಗತೀಕರಣವು ಇತ್ತೀಚಿಗೆ ಬೆಳೆದು ಬಂದಿದೆ ಎಂದು ಹೇಳುವುದುಂಟು. ಆದರೆ ಇದು ಆಧುನಿಕತೆಯ ಹೊಸ ಪರಿಕಲ್ಪನೆಯಾಗಿರುವುದರಿಂದ ಶತಮಾನಗಳ ಹಿಂದಿನಿಂದಲೂ ಬೆಳೆಯುತ್ತಾ ಬಂದಿದೆ. ಇದನ್ನು ಮೂರು ಹಂತಗಳಲ್ಲಿ ಚರ್ಚಿಸಬಹುದಾಗಿದೆ. ಇದು ಪ್ರಮುಖವಾಗಿ ಹಡಗುಗಳ ಹುಟ್ಟು ಹಾಗೂ ನಿರ್ಮಾಣ ಕಾರ್ಯದಿಂದ ಆರಂಭಗೊಂಡಿದೆ. ಹಡಗುಗಳ ನಿರ್ಮಾಣವು ೧೯ನೇ ಶತಮಾನದಿಂದ ಹೆಚ್ಚು ಪ್ರಗತಿಯನ್ನು ಕಂಡಿತು. ಇದರಿಂದಾಗಿ ಯುರೋಪಿಯನ್ನರು ವ್ಯಾಪಾರ ನಡೆಸುವುದಕ್ಕಾಗಿ ಬೇರೆ ಬೇರೆ ರಾಷ್ಟ್ರಗಳನ್ನು ಕಂಡುಹಿಡಿಯಲು ಅನ್ವೇಷಣೆ ನಡೆಸಿದರು. ಆ ಮೂಲಕ ಬೇರೆ ಬೇರೆ ರಾಷ್ಟ್ರಗಳ ಜೊತೆ ವ್ಯಾಪಾರ ಸಂಪರ್ಕವನ್ನು ಇಟ್ಟುಕೊಂಡರು. ಅಲ್ಲದೆ ವ್ಯಾಪಾರವನ್ನು ಅಭಿವೃದ್ಧಿ ಪಡಿಸುವುದಕ್ಕೆ, ಸ್ನೇಹಕ್ಕೆ ಕೈಚಾಚಿದರು. ಈ ಹಂತದಲ್ಲಿ ವ್ಯಾಪಾರ ಸಂಪರ್ಕವನ್ನು ಇಟ್ಟುಕೊಳ್ಳುವ ಮೂಲಕ ಸ್ವಲ್ಪ ಪ್ರಮಾಣದಲ್ಲಿ ಆಧುನಿಕತೆಯು ಆರಂಭಗೊಂಡಿತು ಎನ್ನಬಹುದು.

೧೯ನೆಯ ಶತಮಾನವು ಆಧುನಿಕತೆಯ ಎರಡನೆಯ ಹಂತವಾಗಿ ಆರಂಭಗೊಂಡಿತು ಎಂದು ಹೇಳಬಹುದು. ಈ ಹಂತದಲ್ಲಿ ೧೮೪೦ರಿಂದ ಟೆಲಿಗ್ರಾಫಿಕ್ ಸಂವಹನ ಪ್ರಾರಂಭವಾಯಿತು.[೫] ಅಲ್ಲದೆ ದೂರವಾಣಿ ಕರೆಗಳು ಹಾಗೂ ವಿಮಾನಯಾನದ ಆರಂಭವು ಈ ಕಾಲದಲ್ಲೇ ನಡೆಯಿತು. ಅನಂತರದ ದಿನಗಳಲ್ಲಿ ಅಂತರ ಭೂಖಂಡದ ಶಾರ್ಟ್‌ವೇವ್ ಬಾನುಲಿ ಕಾರ್ಯಕ್ರಮಗಳು ೧೯೨೦ರಲ್ಲಿ ಪ್ರಾರಂಭವಾದವು. ಇದರಿಂದಾಗಿ ಐದನೆಯ ಜಾರ್ಜ್ ದೊರೆಯು ಮಾಡಿದ ಭಾಷಣವು ೧೯೩೦ರಲ್ಲಿ ೨೪೨ ಆಕಾಶವಾಣಿ ಕೇಂದ್ರಗಳಲ್ಲಿ ಪ್ರಾರಂಭಗೊಂಡಿತು.[೬] ತದನಂತರ ಅನೇಕ

ರಾಷ್ಟ್ರಗಳಲ್ಲಿ ಜಾಗೃತಿ ಉಂಟಾಗಿ ತಮ್ಮ ರಾಷ್ಟ್ರಗಳ ಗಡಿರೇಖೆ ರಕ್ಷಿಸಲು ಮತ್ತು ಸಂಬಂಧಗಳನ್ನು ಹೆಚ್ಚಿಸಿಕೊಳ್ಳಲು ಬಳಕೆ ಆದವು.

ಇಂದು ಆರಂಭಗೊಂಡಿರುವ ಮಾಹಿತಿ-ತಂತ್ರಜ್ಞಾನ, ವೈಜ್ಞಾನಿಕ ಪ್ರಗತಿಯು ಜಾಗತೀಕರಣದ ಮೂರನೆಯ ಹಂತ ಎನ್ನಬಹುದು. ಈ ಹಂತದಲ್ಲಿ ಆಧುನಿಕತೆಯು ಹೆಮ್ಮರವಾಗಿ ಬೆಳೆದು ಬಿಟ್ಟಿದೆ. ತಂತ್ರಜ್ಞಾನದಿಂದ ಏನೆಲ್ಲಾ ಮಾಡಲು ಸಾಧ್ಯವಿದೆಯೋ, ಅದನ್ನೆಲ್ಲಾ ಉತ್ಪಾದಿಸಲು ಪ್ರಯತ್ನಗಳು ನಡೆಯುತ್ತಿವೆ. ಉದಾಹರಣೆಗೆ ವಿಜ್ಞಾನ ಮತ್ತು ವೈಜ್ಞಾನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು ತದ್ರೂಪಿ ಕುರಿಗಳನ್ನು ಉತ್ಪಾದನೆ ಮಾಡಲಾಗಿದೆ. ತಂತ್ರಜ್ಞಾನದಿಂದ ತಾಂತ್ರಿಕ ಕೈಗಾರಿಕೆಗಳ ಸ್ಥಾಪನೆ, ರಿಮೋಟ್ ಟಿ.ವಿ, ರಿಮೋಟ್ ಕಾರುಗಳು, ಮೊಬೈಲ್ ಫೋನ್, ಅತ್ಯಾಧುನಿಕ ವಿಮಾನಯಾನಗಳ ಆರಂಭ, ಕಂಪ್ಯೂಟರ್‌ನಲ್ಲಿಯೇ ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್, ಇಂಟರ್‌ನೆಟ್ ಸೌಲಭ್ಯ ಇವುಗಳಲ್ಲದೆ ಅಂತರಿಕ್ಷಕ್ಕೆ ಯಾನ ಮಾಡುವುದು, ಉಪಗ್ರಹಗಳನ್ನು ತಯಾರಿಸಿ ಉಡಾವಣೆ ಮಾಡುವುದು ಇನ್ನು ಮುಂತಾದ ಸೌಲಭ್ಯಗಳು ಈ ಆಧುನಿಕತೆಯಿಂದ ಉಂಟಾಯಿತು ಎನ್ನಬಹುದು. ಹಿಂದೆ ಈ ಸೌಲಭ್ಯಗಳು ಇರಲಿಲ್ಲ. ಆದ್ದರಿಂದ ಟೆಲಿಫೋನ್ ಮಾಡಬೇಕಾದರೆ ಟ್ರಂಕಲ್ ಬುಕ್ ಮಾಡಿ ಕಾಯಬೇಕಾದ ಪರಿಸ್ಥಿತಿ ಇತ್ತು. ಅಲ್ಲದೆ ಬೇರೊಂದು ರಾಷ್ಟ್ರಗಳಿಂದ ವಸ್ತುಗಳನ್ನು ಆಮದು ಮಾಡಿಕೊಳ್ಳಬೇಕಾದರೆ ಆರು ತಿಂಗಳೋ, ವರ್ಷವೋ ಬೇಕಾಗಿತ್ತು. ಆದರೆ ಇಂದು ಈ ಮಾಹಿತಿ ತಂತ್ರಜ್ಞಾನದಿಂದ ಇಪ್ಪತ್ತುನಾಲ್ಕು ಘಂಟೆಯೊಳಗೆ ನಮಗೆ ಬೇಕಾದ ವಸ್ತುಗಳನ್ನು ಆಮದು ಮಾಡಿಕೊಳ್ಳಬಹುದು. ಅಲ್ಲದೆ ಬೇಕಾದವರನ್ನು ಭೇಟಿ ಮಾಡುವ ಸೌಲಭ್ಯ ದೊರಕಿದೆ. ಇದು ಈ ಜಾಗತೀಕರಣದ ಹೊಸ ಕೊಡುಗೆ.

ಪ್ರತಿಯೊಂದು ರಾಷ್ಟ್ರಗಳು ಸ್ವಾವಲಂಬಿಯಾಗಿರಲು ಸಾಧ್ಯವಿಲ್ಲ. ತಾವು ಉತ್ಪಾದಿಸಿದ ವಸ್ತುಗಳನ್ನು ರಫ್ತು ಮಾಡಿ, ತಮಗೆ ಅವಶ್ಯಕವಿರುವ ವಸ್ತುಗಳನ್ನು ಬೇರೊಂದು ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳಬೇಕು. ಇದಕ್ಕಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆ ಸ್ಥಾಪಿಸಲು ಕಾರಣವಾಯಿತು. ಆ ಮೂಲಕ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿಕೊಂಡು, ಎಲ್ಲಾ ರಾಷ್ಟ್ರಗಳು ವ್ಯಾಪಾರ ನಡೆಸಲು ಪ್ರಯತ್ನಿಸತೊಡಗಿದವು. ಅಲ್ಲದೆ ಇಂದು ಹೊಸ ವಿಚಾರಧಾರೆಗಳು ವೈಜ್ಞಾನಿಕ ಶಿಕ್ಷಣ, ತಂತ್ರಜ್ಞಾನ ಅಳವಡಿಕೆಯಿಂದ ಕೈಗಾರಿಕೆ ಪ್ರಗತಿ ಆಗಿದೆ. ಇವುಗಳಿಂದ ಯಾವುದೇ ಒಂದು ದೇಶವು ಹಿಂದೆ ಸರಿಯಲು ಸಾಧ್ಯವಿಲ್ಲ. ಈ ಆಧುನಿಕತೆಯ ಹೊಸ ಪರಿಕಲ್ಪನೆಯಾದ ಜಾಗತೀಕರಣವು, ಪ್ರಪಂಚದ ಎಲ್ಲಾ ಕಡೆಯೂ ಪ್ರಸರಿಸಿಕೊಂಡಿರುವುದರಿಂದ, ಎಲ್ಲಾ ದೇಶಗಳು ಅದರ ಒಳಗಡೆ ಸೇರಿಕೊಳ್ಳುತ್ತಿವೆ. ಅಲ್ಲದೆ ಇದರಿಂದ ಬೇರ್ಪಟ್ಟು ಬದುಕುವುದು ಸಾಧ್ಯವಿಲ್ಲವೇನೋ? ಅನ್ನುವಂತಾಗಿದೆ.

ಜಾಗತೀಕರಣವು 'ಮುಕ್ತವ್ಯಾಪಾರನೀತಿ, ಉದಾರೀಕರಣ ಮತ್ತು ಖಾಸಗೀಕರಣ' ಎಂಬ ಪರಿಕಲ್ಪನೆಗಳನ್ನು ಹೊಂದಿದೆ. ಈ ಜಾಗತೀಕರಣ ಎಂಬ ಪರಿಕಲ್ಪನೆಯನ್ನು ನವವಸಾಹತುಶಾಹೀ ವಕ್ತಾರ ಎಂದೇ ಗುರುತಿಸಲ್ಪಡುವ ಅಮೇರಿಕಾ ಸಂಯುಕ್ತ ಸಂಸ್ಥಾನವು ಪ್ರಚಾರ ಮಾಡಿತು. ಈ ಜಾಗತೀಕರಣದ ನೀತಿಯು ಪ್ರಮುಖವಾಗಿ, ಯಾವುದೇ ದೇಶದ ವಸ್ತುವನ್ನು ಆಮದು ಮತ್ತು ರಫ್ತು ಮಾಡಲು ಸುಂಕ ವಿಧಿಸುವಂತಿಲ್ಲ. ಹಿಂದುಳಿದ ರಾಷ್ಟ್ರಗಳ ಅಭಿವೃದ್ಧಿಗೋಸ್ಕರ ಪ್ರಗತಿಶೀಲ ರಾಷ್ಟ್ರಗಳು ಹೂಡುವ ಬಂಡವಾಳಕ್ಕೆ ನಿರ್ಬಂಧ ಹಾಕುವಂತಿಲ್ಲ. ಅಲ್ಲದೆ ತಾವು ಉತ್ಪಾದಿಸಿದ ವಸ್ತುಗಳನ್ನು ಎಲ್ಲ ರಾಷ್ಟ್ರಗಳು ಸಹ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಪ್ರಗತಿ ಹೊಂದಲು ಪ್ರಯತ್ನಿಸತೊಡಗಿವೆ. ಇದರಿಂದಾಗಿ ಬಹು ರಾಷ್ಟ್ರೀಯ ಕಂಪನಿಗಳು ಪ್ರಪಂಚದ ಎಲ್ಲಕಡೆಯು ಕೈಗಾರಿಕೆಗಳನ್ನು ಸ್ಥಾಪಿಸಲು ಪ್ರಯತ್ನಿಸಿದವು. ಅಲ್ಲದೆ ಮುಕ್ತ ವ್ಯಾಪಾರ ನಡೆಸಲು ಸಾಧ್ಯವಾಗುತ್ತಿದೆ. ಈ ಜಾಗತೀಕರಣ ಎಂಬ ಪ್ರಕ್ರಿಯೆಗೆ ಮೊದಲು ದೂರ ಉಳಿದಿದ್ದ, ಚೀನಾವು ಸಹ ಇಂದು ತನ್ನ ಬಾಗಿಲನ್ನು ತೆರೆಯುತ್ತಿದೆ.

ಹಿಂದಿನ ವಸಾಹತುಶಾಹಿ ರಾಷ್ಟ್ರಗಳು ಬಂಡವಾಳ ಹೂಡಿ ಸಾಮ್ರಾಜ್ಯಶಾಹಿಗಳಾಗಿ ಮೆರೆದವು. ಆದರೆ ಇಂದು ಈ ಆಧುನಿಕತೆಯಿಂದಾಗಿ ಜಾಗತೀಕರಣವನ್ನು ಹುಟ್ಟುಹಾಕಿ ನವವಸಾಹತುಶಾಹಿ ವಾತಾವರಣವನ್ನು ಪ್ರಪಂಚದ ಎಲ್ಲ ರಾಷ್ಟ್ರಗಳಲ್ಲೂ ಮೂಡಿಸಿವೆ. ಈ ನಿಟ್ಟಿನಲ್ಲಿ ಹಲವು ಬಗೆಯ ಟೀಕೆಗಳಿವೆ. ಅಂದರೆ ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಣೆಯನ್ನು ಮಾಡತೊಡಗಿವೆ ಎಂಬ ನಿಲುವು. ಇದರಿಂದಾಗಿ ಈ ಜಾಗತೀಕರಣ ಎಂಬ ಪರಿಕಲ್ಪನೆಗೆ ನಿರ್ಧಿಷ್ಟವಾದ ವ್ಯಾಖ್ಯೆಯನ್ನು ರಚಿಸಲು ಸಾಧ್ಯವಾಗಿಲ್ಲ. ಇದರಿಂದಾಗಿ ಅನ್ಯಾಯಕ್ಕೆ ಒಳಗಾದ ರಾಷ್ಟ್ರಗಳ ವಿದ್ವಾಂಸರು ಒಂದೊಂದು ರೀತಿಯಲ್ಲಿ ವ್ಯಾಖ್ಯೆಗಳನ್ನು, ವಿಶ್ಲೇಷಣೆಗಳನ್ನು ಮಾಡುತ್ತಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಜರುಗಿದ ದಶಮಾನೋತ್ಸವದ ಅಂಗವಾಗಿ ಕರ್ನಾಟಕ ಮತ್ತು ಜಾಗತೀಕರಣ, ಎಂಬ ವಿಚಾರ ಸಂಕಿರಣ ಏರ್ಪಟ್ಟಿತ್ತು. ಈ ವಿಚಾರ ಸಂಕಿರಣದಲ್ಲಿ ಹಲವು ಅಭಿಪ್ರಾಯಗಳು ಧ್ವನಿಸಿದವು. ಅವುಗಳಲ್ಲಿ "ಬಂಡವಾಳ ಮತ್ತು ಮಾರುಕಟ್ಟೆಯ ಅಂತರ ರಾಷ್ಟ್ರೀಕರಣ" ಎಂಬ ಒಂದು ವಾದವು ಇದೆ.

ಅಂತೆಯೇ ಇನ್ನೊಬ್ಬ ವಿದ್ವಾಂಸರು "ಜಾಗತೀಕರಣ ಎಂಬುದು ಆಧುನಿಕತೆಯ ಸೋಲಿನಿಂದ ತನ್ನ ಮಹತ್ತ್ವವನ್ನು ಪಡೆಯುತ್ತದೆ. ಇದು ಬಂಡವಾಳದ ಕೊನೆಯ ಹಂತ, ಒಂದು ಪ್ರಕ್ರಿಯೆ. ಸಾಮ್ರಾಜಶಾಹಿಯ ಇನ್ನೊಂದು ಮುಖ" ಎಂಬ ವಾದವನ್ನು ಮಂಡಿಸಿದ್ದರು.

ತುಮಕೂರಿನಲ್ಲಿ ನಡೆದ ಅಖಿಲ ಭಾರತದ ೭೦ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ ಡಾ.ಯು.ಆರ್.ಅನಂತಮೂರ್ತಿ ಅವರ ಪ್ರಕಾರ-

“ಜಾಗತೀಕರಣದ ಈ ದಿನಗಳಲ್ಲಿ ಜಗತ್ತೇ ಸ್ಥಳವಾಗಿ ಬಿಡುತ್ತದೆಂಬ ಭ್ರಾಂತಿಯನ್ನು ಬೆಳಸುವ ಸಂಚು ನಡೆದಿದೆ. ಜಾಗತೀಕರಣವೆಂದರೆ ನಿಜದಲ್ಲಿ ಅಮೇರಿಕೀಕರಣ, ನಾವೆಲ್ಲರೂ ಒಂದು ಮಾರುಕಟ್ಟೆಯಾಗಿ ಮುಂದುವರಿದ ರಾಷ್ಟ್ರಗಳಿಗೆ ಒದಗಿ, ನಮ್ಮ ಪರಿಸರವನ್ನು ನಾಶಮಾಡಿಕೊಂಡು, ಕುದುರೆಮುಖದ ಜೀವಜಾಲಸಂಪನ್ನ ಬೆಟ್ಟಗಳ ಅದಿರನ್ನು ಇರಾನಿಗೋ, ಜಪಾನಿಗೋ ಮಾರಿ, ನದಿಗಳನ್ನು ಚರಂಡಿಗಳಾಗಿ ಪರಿವರ್ತಿಸಿ, ವರ್ಲ್ಡ್‌ಬ್ಯಾಂಕ್ ಸರ್ಟಿಫಿಕೇಟ್ ಪಡೆದು ಬೀಗಿ, ನಮ್ಮ ಭಾಷೆಗಳನ್ನು ಕಳೆದುಕೊಂಡು, ನಮ್ಮ ರಾಜಕಾರಣವನ್ನು ಅನ್ಯರ ಆದೇಶದಂತೆ ನಡೆಸಿಕೊಳ್ಳುತ್ತಾ ಕನ್ಸೂಮರ್ ಸ್ವರ್ಗದಲ್ಲಿ ಕೆಲವು ಕಾಲವಿದ್ದು ಮುಂದೊಂದುದಿನ ಅರ್ಜೆಂಟೀನಾದಂತೆ ಆಗುವುದು ಇರುಳು ಕಂಡ ಬಾವಿಯಲ್ಲಿ ಹಗಲು ಬೀಳುವುದು”[2]

-ಎಂದು ಹೇಳಿದ್ದಾರೆ.

ಭಾರತದಲ್ಲಿ ಆಧುನಿಕತೆಯು ಐರೋಪ್ಯರ ಹಾಗೂ ಇಂಗ್ಲಿಷ್ ವಸಾಹತುಶಾಹಿ ಕಾಲಘಟ್ಟದಲ್ಲೇ ಆರಂಭವಾಯಿತು. ಅವರು ಅಳವಡಿಸಿದ ಇಂಗ್ಲಿಷ್ ಶಿಕ್ಷಣಪದ್ಧತಿ, ರೈಲುಸಂಪರ್ಕ ವ್ಯವಸ್ಥೆ, ಪತ್ರಿಕೆಗಳ ಸೌಲಭ್ಯ, ಟೆಲಿಫೋನ್ ವ್ಯವಸ್ಥೆ, ಆಡಳಿತ ಪದ್ಧತಿ ಇನ್ನು ಮುಂತಾದವುಗಳಿಂದ ಭಾರತೀಯರಲ್ಲಿ ಆಧುನಿಕತೆಯ ಬೀಜ ಮೊಳೆಯಿತು. ಇದರಿಂದಾಗಿ ಭಾರತೀಯರೆಲ್ಲರೂ ಆಧುನಿಕತೆಯನ್ನು ಒಂದಲ್ಲ ಒಂದು ರೀತಿಯಲ್ಲಿ ಒಂದೊದು ಕಾಲಘಟ್ಟದಲ್ಲಿ ಅಳವಡಿಸಿಕೊಳ್ಳಲು ಪ್ರಾರಂಭಿಸಿದರು. ಅಲ್ಲದೆ ಆಧುನಿಕತೆಯಲ್ಲಿ ಜೀವನ ನಡೆಸುವುದಕ್ಕೆ ಆರಂಭಿಸತೊಡಗಿದರು.

ಭಾರತವು ವಿಶ್ವಸಂಸ್ಥೆಯ ಸದಸ್ಯತ್ವವನ್ನು ಪಡೆದ ನಂತರ ಅಂತರರಾಷ್ಟ್ರೀಯ ವ್ಯಾಪಾರ ನಡೆಸಲು ಒಪ್ಪಿಕೊಂಡಂತೆ ಆಯಿತು. ಅನಂತರ ವಿಶ್ವಬ್ಯಾಂಕ್, ಐ.ಎಂ.ಎಫ್ ಬ್ಯಾಂಕುಗಳ ಸ್ಥಾಪನೆಗೆ ನೆರವು ನೀಡತೊಡಗಿತು. ಆ ಮೂಲಕ ಜಾಗತೀಕರಣ ಪ್ರಕ್ರಿಯೆಗೆ ಸೇರಿಕೊಳ್ಳಲು ಪ್ರಯತ್ನಿಸತೊಡಗಿತು. ಆದರೆ ೧೯೯೦ರಲ್ಲಿ ಕೇಂದ್ರದಲ್ಲಿ ಕಾಂಗ್ರೆಸ್ ಸರ್ಕಾರವನ್ನು ರಚಿಸಿತು. ಅಂದಿನ ಪ್ರಧಾನಿ ಪಿ.ವಿ.ನರಸಿಂಹರಾವ್, ಅರ್ಥಸಚಿವರಾಗಿದ್ದ ಮನಮೋಹನ್‌ಸಿಂಗ್ ಅಧಿಕಾರವಹಿಸಿಕೊಂಡಿದ್ದರು. ಇವರುಗಳು ೧೯೯೧ರಲ್ಲಿ ಗ್ಯಾಟ್‌ಗೆ ಸಹಿ ಮಾಡುವುದರ ಮೂಲಕ ಜಾಗತೀಕರಣದ ಪ್ರಕ್ರಿಯೆಗೆ ಒಳಪಟ್ಟರು. ಇದರಿಂದಾಗಿ ಭಾರತ ವಿದೇಶಿ ನೆರವು ಪಡೆದು ಅಭಿವೃದ್ಧಿ ಹೊಂದಲು ಪ್ರಯತ್ನಿಸಿತು. ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳಿಗೆ ಬಂಡವಾಳ ಹೂಡಲು ಎಲ್ಲ ರೀತಿಯ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಇದರಿಂದಾಗಿ ನೈಸರ್ಗಿಕ ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸಿಕೊಂಡು, ಬಹುರಾಷ್ಟ್ರೀಯ ಕಂಪನಿಗಳು ಪ್ರಗತಿ ಹೊಂದಲು ಪ್ರಾರಂಭಿಸಿದವು. ಅಲ್ಲದೆ ಸರ್ಕಾರದ ವತಿಯಿಂದ ಕೆಲವೊಂದು ಕೈಗಾರಿಕೆಗಳನ್ನು ಸ್ಥಾಪಿಸಿ, ತಾಂತ್ರಿಕತೆಯನ್ನು ಅಳವಡಿಸಿಕೊಂಡು ಭಾರತವು ಪ್ರಗತಿ ಹೊಂದಲು ಬಯಸಿತು. ಇದಲ್ಲದೆ ಗ್ಯಾಟ್‌ನ ನಂತರ ೧೯೯೫ರಲ್ಲಿ ವಿಶ್ವ ವ್ಯಾಪಾರ ಸಂಘಟನೆಗೆ ಬೆಂಬಲ, ಸಹಕಾರ ನೀಡಿ ಅದರ ಅಸ್ತಿತ್ವಕ್ಕೆ ಕಾರಣವಾಯಿತು. ಹೀಗಾಗಿ ಭಾರತವು ಪೂರ್ಣ ಪ್ರಮಾಣದಲ್ಲಿ ಜಾಗತೀಕರಣದ ಪ್ರಕ್ರಿಯೆಗೆ ಒಳಪಡಿಸಿಕೊಂಡಂತೆ ಆಯಿತು.

ಈ ಜಾಗತೀಕರಣದ ವಿಷಯವನ್ನು ಕರ್ನಾಟಕಕ್ಕೆ ಮಾತ್ರ ಸೀಮಿತಗೊಳಿಸುವುದು ಸಾಧ್ಯ ಇಲ್ಲ. ಜಾಗತೀಕರಣದ ಪ್ರಕ್ರಿಯೆ ಜಗತ್ತಿನಲ್ಲೆಡೆ ಪಸರಿಸಿದೆ. ಕರ್ನಾಟಕವು ಭಾರತ ಸರ್ಕಾರ ಗ್ಯಾಟ್‌ಗೆ ಸಹಿ ಮಾಡಿದ ನಂತರ ಈ ಪ್ರಕ್ರಿಯೆಗೆ ಪೂರ್ತಿ ಒಳಪಟ್ಟಿತು. ಆದರೆ ಆಧುನಿಕತೆಯು ಕರ್ನಾಟಕದಲ್ಲಿ ಬಹಳ ಹಿಂದಿನಿಂದಲೂ ಬೆಳೆದು ಬಂದಿದೆ ಎನ್ನಬಹುದು. ಅದರಂತೆ ವಿವಿಧ ಸಂಸ್ಥಾನಗಳಿಗೆ ಹಂಚಿಹೋಗಿದ್ದ ಕರ್ನಾಟಕವನ್ನು ಒಂದು ಗೂಡಿಸಿದ್ದು ಆಧುನಿಕತೆಯ ಕಲ್ಪನೆಯೇ. ಜಾಗತೀಕರಣಕ್ಕೆ ಒಳಪಟ್ಟ ಕರ್ನಾಟಕವು ಎಲ್ಲ ರಂಗದಲ್ಲೂ ಅಭಿವೃದ್ಧಿ ಹೊಂದಲು ಪ್ರಯತ್ನಿಸುತ್ತದೆ. ಅಲ್ಲದೇ ವಿದೇಶಿ ಬಹುರಾಷ್ಟ್ರೀಯ ಕಂಪನಿಗಳು ಅಥವಾ ನವವಸಾಹತುಶಾಹಿಯು ಕಂಪನಿಗಳು ಬಂದು ಕೈಗಾರಿಕೆಗಳನ್ನು ಸ್ಥಾಪಿಸಿವೆ. ಇದರಿಂದಾಗಿ ಕರ್ನಾಟಕದಲ್ಲಿರುವ ನೈಸರ್ಗಿಕ ಸಂಪನ್ಮೂಲಗಳನ್ನು ಸಮರ್ಪಕವಾಗಿ ಬಳಸಿಕೊಂಡು ಅಧಿಕ ಉತ್ಪಾದನೆ ಮಾಡಲು ಸಾಧ್ಯ ಆಗುತ್ತಿದೆ. ಅದರಲ್ಲೂ ಕರ್ನಾಟಕವೂ ಇಂದು ಮಾಹಿತಿ ತಂತ್ರಜ್ಞಾನದಲ್ಲಿ ಹೆಚ್ಚು ಪ್ರಗತಿಯನ್ನು ಸಾಧಿಸಿದೆ. ವಿಶ್ವದಲ್ಲೇ ಬೆಂಗಳೂರು ಮಾಹಿತಿ ತಂತ್ರಜ್ಞಾನದಲ್ಲಿ ಪ್ರಥಮ ಸ್ಥಾನ ಪಡೆಯುತ್ತಿದೆ. ಅಲ್ಲದೆ 'ಐಟಿ ಸಿಟಿ' ಎಂದೇ ಪ್ರಖ್ಯಾತಿಯನ್ನು ಪಡೆದಿದೆ. ಕರ್ನಾಟಕದಲ್ಲಿ ಬಂಡವಾಳ ಹೂಡಲು ಹೆಚ್ಚಿನ ಬಹುರಾಷ್ಟ್ರೀಯ ಕಂಪನಿಗಳಿಗೆ ಆಕರ್ಷಕ ತಾಣವಾಗಿ ಪರಿಣಮಿಸಿದೆ ಎಂದು ಹೇಳಬಹುದು.

ಭಾರತ ಸರ್ಕಾರ ಮತ್ತು ಕರ್ನಾಟಕಗಳೆರೆಡು ಸಹ ವಿದೇಶಿಗಳಿಗೆ ಭೇಟಿಕೊಟ್ಟು ಬಂಡವಾಳ ಹೂಡಲು ಬಹುರಾಷ್ಟ್ರೀಯ ಕಂಪನಿಗಳಿಗೆ ಆಹ್ವಾನ ನೀಡುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳಿಗೆ ಕೈಗಾರಿಕೆಗಳನ್ನು ಸ್ಥಾಪಿಸಲು ಎಲ್ಲ ರೀತಿಯ ಸೌಲಭ್ಯಗಳನ್ನು ಕಲ್ಪಿಸಿಕೊಡುತ್ತಿವೆ. ಇದರ ಲಾಭವನ್ನು ಪಡೆಯಲು ಬಂಡವಾಳಶಾಹಿ ರಾಷ್ಟ್ರಗಳು, ಬಂದು ಬಂಡವಾಳ ಹೂಡಿ ಹೆಚ್ಚು ಲಾಭಗಳಿಸತೊಡಗಿವೆ. ಅಲ್ಲದೆ ಅಂತರಾಷ್ಟ್ರೀಯ ಹಣಕಾಸು ನಿಧಿ ಮತ್ತು ವಿಶ್ವಬ್ಯಾಂಕುಗಳು, ಭಾರತವು ಹೆಚ್ಚು ಅಭಿವೃದ್ಧಿಗೊಳ್ಳುತ್ತಿದೆ ಎಂದು ಸರ್ಟಿಫಿಕೇಟ್‌ನ್ನು ಸಹಕೊಡುತ್ತಿವೆ ಎನ್ನಬಹುದು.

ಭಾರತವು ಪ್ರತಿಯೊಂದು ಕ್ಷೇತ್ರಗಳಲ್ಲಿಯೂ ವೈಜ್ಞಾನಿಕತೆ, ತಂತ್ರಜ್ಞಾನವನ್ನು ಅಳವಡಿಸಿಕೊಂಡು ಅಭಿವೃದ್ಧಿ ಹೊಂದಲು ಪ್ರಯತ್ನಿಸುತ್ತಿದೆ. ಆದರೆ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ಅಂದು ಚಿಂತಿಸಿದ ಚಿಂತನೆಗಳು ಇಂದು ಎಷ್ಟು ಪ್ರಸ್ತುತ ಎಂಬುದು ಪ್ರಧಾನವಾಗುತ್ತಿವೆ. ಅವರ ಚಿಂತನೆಗಳನ್ನು ಈ ಜಾಗತೀಕರಣದ ಪ್ರಕ್ರಿಯೆಯ ಸಂದರ್ಭದಲ್ಲಿ ಇಟ್ಟು ಪರಿಶೀಲಿಸುವ ಜರೂರು ಇದೆ.

ಭಾರತವು ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿದ್ದು ಅದರ ಪ್ರಮುಖ ತತ್ತ್ವಗಳಾದ ಉದಾರೀಕರಣ ಮತ್ತು ಖಾಸಗೀಕರಣದ ನೀತಿಗಳನ್ನು ಅನುಸರಣೆಯಿಂದ. ಇದರಿಂದಾಗಿ ದೇಶದ ಮೇಲೆ ಯಾವ ರೀತಿಯ ಪ್ರಭಾವ ಆಗಿದೆ? ಯಾವ ಕ್ಷೇತ್ರಗಳಲ್ಲಿ ಎಷ್ಟು ಪ್ರಗತಿಯನ್ನು ಸಾಧಿಸುತ್ತಿದೆ? ಈ

ತತ್ತ್ವಗಳಿಂದ ಭಾರತದ ಪರಿಸ್ಥಿತಿಯು ಯಾವ ಮಟ್ಟಕ್ಕೆ ಇಳಿಯುತ್ತಿದೆ? ಎಂಬುದನ್ನು ಕಿರು ಪರಿಚಯದ ಮೂಲಕ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಭಾರತವು ಉದಾರೀಕರಣ ಹಾಗೂ ಮುಕ್ತವ್ಯಾಪಾರ ನೀತಿಗಳಿಂದಾಗಿ, ವ್ಯಾಪಾರ-ವಾಣಿಜ್ಯಗಳ ಮೇಲೆ ಯಾವುದೇ ನಿರ್ಬಂಧವನ್ನು ವಿಧಿಸುವಂತಿಲ್ಲ. ಅಲ್ಲದೇ ವಿದೇಶಗಳಿಂದ ಬರುವ ವಸ್ತುಗಳನ್ನು ಸುಂಕವಿಲ್ಲದೆ ಆಮದು ಮಾಡಿಕೊಳ್ಳುತ್ತಿದೆ. ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದಿಸಿದ ವಸ್ತುಗಳಿಗೂ ಯಾವುದೇ ನಿರ್ಬಂಧವನ್ನು ಹೇರುತ್ತಿಲ್ಲ. ಇದರಿಂದ ಸುಲಭ ದರದಲ್ಲಿ ವಸ್ತುಗಳನ್ನು ಕೊಂಡುಕೊಳ್ಳಬಹುದು. ಆದರೆ ನಮ್ಮಲ್ಲಿ ಉತ್ಪಾದಿತವಾದ ವಸ್ತುಗಳ ಮಾರುಕಟ್ಟೆ ಬೆಲೆ ಕುಸಿಯುತ್ತಿದೆ. ಹೀಗಾಗಿ ಜಾಗತೀಕರಣದ ಪ್ರಕ್ರಿಯೆಯು ದೇಶದಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ-ವ್ಯಾಣಿಜ್ಯಗಳಿಗೆ ತುಂಬ ಹೊಡೆತವನ್ನು ಕೊಟ್ಟಿದೆ ಎಂದರೆ ತಪ್ಪಿಲ್ಲ. ಅಲ್ಲದೆ ಗ್ರಾಮೀಣ ಜನರು ಸಹ ಇದರ ನೋವನ್ನು ಅನುಭವಿಸುವ ಸ್ಥಿತಿಯನ್ನು ತಲುಪಿದ್ದಾರೆ.

ಜಾಗತೀಕರಣದ ಹಿನ್ನೆಲೆಯಲ್ಲಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ಗ್ರಾಮಗಳ ಬಗ್ಗೆ ಚಿಂತಿಸಿದ ಚಿಂತನೆಗಳು ದೂರ ಉಳಿದಿವೆ. ವಿದೇಶಗಳಿಂದ ನೆರವು ಪಡೆದು ಗ್ರಾಮೀಣ ಅಭಿವೃದ್ಧಿ ಕಾರ್ಯಗಳನ್ನು ಸರ್ಕಾರವು ಕೈಗೊಳ್ಳುತ್ತಿವೆ. ಇದರಿಂದಾಗಿ ರಸ್ತೆಗಳ ನಿರ್ಮಾಣ, ಕುಡಿಯುವ ನೀರಿನ ಸೌಲಭ್ಯ, ವಸತಿಗಳ ಹಂಚಿಕೆ, ಆರೋಗ್ಯಸುಧಾರಣಾ ಕ್ರಮಗಳನ್ನು ಗ್ರಾಮೀಣ ಜನರಿಗೆ ನೀಡುತ್ತಿವೆ. ಆದರೆ ಇದನ್ನು ಎಲ್ಲ ಗ್ರಾಮಗಳಿಗೂ ವಿಸ್ತರಿಸಲು ಆಗುತ್ತಿಲ್ಲ. ಏಕೆಂದರೆ ಈ ಜಾಗತೀಕರಣವು ಅಧಿಕಾರವನ್ನು ಕೇಂದ್ರಿಕೃತಗೊಳಿಸುತ್ತಿರುವುದು. ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿಯೂ ಸಿಕ್ಕಿಕೊಳ್ಳುತ್ತಿರುವ ಪ್ರಮೇಯ ಒದಗಿದೆ ಎನ್ನಬಹುದು. ಯಾಕೆಂದರೆ ಪ್ರಬಲರಾದ ಕಾಣದ ಕೈಗಳೆಂದೇ ಕರೆಯಬಹುದಾದ ರಾಜಕೀಯ ವ್ಯಕ್ತಿಗಳು ಗ್ರಾಮೀಣ ಅಧಿಕಾರವನ್ನು ನಡೆಸುತ್ತಿರುವುದು. ಇದರಿಂದಾಗಿ ಗ್ರಾಮೀಣ ಜನರಿಗೆ ಸರಿಯಾದ ಅಧಿಕಾರ ಸಿಗುತ್ತಿಲ್ಲ. ಇಂದು ಗ್ರಾಮೀಣ ಜನರ ಜೀವನ ಸ್ಥಿತಿಯು ಅಸ್ತವ್ಯಸ್ತತೆಯಿಂದ ಕೂಡಿದೆ. ಏಕೆಂದರೆ ಗ್ರಾಮೀಣ ಜನರ ಬದುಕು ಸಾಮಾನ್ಯವಾಗಿ ಕೃಷಿಯನ್ನೇ ಅವಲಂಬಿಸಿರುವುದರಿಂದ. ಜಾಗತೀಕರಣದ ಪ್ರಕ್ರಿಯೆಯಲ್ಲಿ ಕೃಷಿಯನ್ನು ಒಂದು ವಾಣಿಜ್ಯ ಬೆಳೆಯನ್ನಾಗಿ ಪರಿವರ್ತಿಸಲಾಗಿದೆ. ಅದಕೋಸ್ಕರ ವಿದೇಶಿ ಕಂಪನಿಗಳು ತಯಾರು ಮಾಡಿದ ಬಿತ್ತನೆ ಬೀಜಗಳನ್ನು ಮತ್ತು ಔಷಧಗಳನ್ನು ಪೇಟೆಂಟ್ ಮತ್ತು ಒಪ್ಪಂದ ಮಾಡಿಕೊಂಡು ಬಳಸುವಂತೆ ಅನುವು ಮಾಡಿಕೊಟ್ಟಿವೆ. ಇದರಿಂದಾಗಿ ತಾವು ಬೆಳದ ಬೆಳೆಗಳನ್ನು ವಿದೇಶಗಳಿಗೆ ಮಾರುವುದರಿಂದ ಕೃಷಿಕರಿಗೆ ನಿರ್ಧಿಷ್ಟವಾದ ಬೆಲೆ ದೊರೆಯುತ್ತಿಲ್ಲ. ಅಲ್ಲದೆ ಮುಂದುವರಿದ ರಾಷ್ಟ್ರಗಳು ಉತ್ಪಾದಿಸಿದ ಬೆಳೆಗಳಿಗಿಂತ ನಮ್ಮ ಕೃಷಿಯ ಬೆಳೆಗಳು ಕಳಪೆ ಗುಣಮಟ್ಟವನ್ನು ಹೊಂದಿವೆ. ಅಲ್ಲದೆ ವಿದೇಶಿ ಮಾರುಕಟ್ಟೆಯು ಸ್ಪರ್ಧೆಯಿಂದ ತಾವು ಬೆಳೆದ ಬೆಳೆಗೆ ಗರಿಷ್ಟ ಲಾಭ ದೊರೆಯುತ್ತಿಲ್ಲ. ಇದಕ್ಕೆ

ಪೂರಕವೆಂಬಂತೆ ಬಹುರಾಷ್ಟ್ರೀಯ ಕಂಪನಿಗಳಿಂದ ಬರುವ ಬಿತ್ತನೆ ಬೀಜಗಳು, ಔಷಧಗಳು ದುಬಾರಿಯಾಗಿದ್ದು ಕಳಪೆ ಗುಣಮಟ್ಟವನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ವಿಶ್ವೇಶ್ವರಯ್ಯ ಅವರು ೧೯೧೩ರಲ್ಲೇ ಕೃಷಿಯಲ್ಲಿ ಅಭಿವೃದ್ಧಿಗೊಳಿಸುವುದಕೋಸ್ಕರ, ಪೆಸ್ಲಿ ಕೋಲ್‌ಮನ್‌ರನ್ನು ನಿರ್ದೇಶಕರಾಗಿ ನೇಮಿಸಿದ್ದರು. ಅಲ್ಲದೆ ವೈಜ್ಞಾನಿಕ ಪ್ರಯೋಗಗಳು, ವ್ಯವಸಾಯದ ಶಿಕ್ಷಣ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದರು. ಕೃಷಿಗೆ ತಗುಲಿದ ರೋಗಗಳನ್ನು ನಿವಾರಿಸಲು ಔಷಧಗಳನ್ನು ಸರ್ಕಾರದ ವತಿಯಿಂದ ವಿತರಿಸುವ ವ್ಯವಸ್ಥೆ ಮಾಡಿದ್ದರು.[೮] ಆದರೆ ಇಂದು ಜಾಗತೀಕರಣದ ಪ್ರಕ್ರಿಯೆಯಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದಿಸುವ ಕಳಪೆ ಗುಣಮಟ್ಟದ ಔಷಧಗಳನ್ನು ರೈತರು ಬಳಸುತ್ತಿದ್ದಾರೆ. ಇದರಿಂದಾಗಿ ರೈತರು ತಾವು ಬೆಳೆದ ಬೆಳೆಗಳು ನಾಶವಾಗುವುದರ ಜೊತೆಗೆ ಸಾಲಗಾರರಾಗುತ್ತಿದ್ದಾರೆ. ಸಾಲವನ್ನು ಮಾಡಿ ಕೃಷಿಯನ್ನೇ ಅವಲಂಬಿಸಿರುವ ರೈತರು ಸಾಲವನ್ನು ತೀರಿಸಿಕೊಳ್ಳಲಾಗದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಹೀಗಾಗಿ ಅಂದೇ ವಿಶ್ವೇಶ್ವರಯ್ಯ ಅವರು ಆಧುನಿಕತೆಯನ್ನು ಅನುಸರಿಸಿ ಕೃಷಿಯನ್ನು ಅಭಿವೃದ್ಧಿ ಪಡಿಸಲು ಕಾರ್ಯರೂಪಕ್ಕೆ ತಂದಿದ್ದ ನೀತಿಗಳು, ಈ ಜಾಗತೀಕರಣದಲ್ಲಿ ಕೊಚ್ಚಿ ಹೋಗುತ್ತಿವೆ ಎನ್ನಬಹುದು. ತೊಗರಿ, ಟಮೋಟೋ, ಆಲೂಗಡ್ಡೆ ಇನ್ನು ಮುಂತಾದ ಬೆಳೆಗಳು ವಿದೇಶಿ ಮಾರುಕಟ್ಟೆಯಲ್ಲಿ ಸ್ಪರ್ಧೆ ಎದರಿಸಲಾಗದೆ, ಮತ್ತು ಬೆಳೆಗಳು ಇಳಿದಿದ್ದುರಿಂದ ರಸ್ತೆಗಳಿಗೆ ಸುರಿಯುತ್ತಿರುವುದು ಬೆಳಕಿಗೆ ಬಂದಿದೆ. ಇದಕ್ಕಾಗಿ ೧೯೪೮ರಲ್ಲಿ ಗ್ಯಾಟ್‌ನ್ನು ಡೆಂಕಲ್, ರೈತರಿಗೆ ಬೆಂಬಲ ಬೆಲೆ ಸೀಗುವಂತೆ ಪ್ರಯತ್ನಿಸಿದರು.ಅವರ ವರದಿಯಿಂದ ಗ್ಯಾಟ್ ನಾಶವಾಗಿ ವಿಶ್ವ ವ್ಯಾಪಾರ ಸಂಘಟನೆ ಸ್ಥಾಪನೆಗೊಂಡಿತು. ಆದರೂ ಸಹ ಗ್ಯಾಟ್ ಕಾರ್ಯ ನಿರ್ವಹಿಸಿದ ರೀತಿಯಲ್ಲೇ, ಇದೂ ಕಾರ್ಯ ನಿರ್ವಹಿಸುತ್ತಿರುವುದರಿಂದ, ರೈತರಿಗೆ ಯಾವುದೇ ಬಗೆಯ ಉಪಯೋಗಗಳು ಆಗುತ್ತಿಲ್ಲ. ಇದರಿಂದಾಗಿ ಆತ್ಮಹತ್ಯ ಪ್ರಕರಣಗಳು ದಿನೇ ದಿನೇ ಹೆಚ್ಚಾಗುವಂತೆ ಆಗಿದೆ. ಅಲ್ಲದೆ ಗಾಂಧಿ ಅವರು ಹೇಳಿದಂತೆ ವ್ಯವಸಾಯದಲ್ಲಿ ಹೆಚ್ಚು ಜನರು ಅವಲಂಬಿಸಿ ಕೊಂಡಿರುವುದರಿಂದ ಜಮೀನುಗಳು ತುಂಡು ತುಂಡಾಗಿ ಹೋಗುತ್ತಿವೆ. ಹೀಗಾಗಿ ಬೆಳೆಗಳ ಅಧಿಕ ಇಳುವರಿಯು ತಪ್ಪಿ ಅದರಿಂದ ಹೆಚ್ಚು ಅಪಾಯಗಳು ಉಂಟಾಗುತ್ತಿವೆ. ಇದರಿಂದ ಈ ಜಾಗತಿಕ ಪ್ರಕ್ರಿಯೆಯಲ್ಲಿ ರೈತರು ಹೆಚ್ಚು ಉತ್ಪಾದನೆ ಮಾಡಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಗಾಂಧಿ ಅವರು ಅಂದು ಚಿಂತಿಸಿದ ಚಿಂತನೆಗಳು ಈ ಜಾಗತೀಕರಣದ ಪ್ರಕ್ರಿಯೆಯಲ್ಲಿ ಪ್ರತಿಫಲ ದೊರೆಯದಂತೆ ಮಾಡಿದೆ ಎನ್ನಬಹುದು.

ವಿಶ್ವಸಂಸ್ಥೆ ಮತ್ತು ಐ.ಎಂ.ಎಫ್ ಸಂಸ್ಥೆಗಳ ನೆರವು ಪಡೆದು ಗ್ರಾಮೀಣ ಜನರ ಆರೋಗ್ಯವನ್ನು ಸುಧಾರಿಸಲು ಸರ್ಕಾರಗಳು ಪ್ರಯತ್ನಿಸುತ್ತಿವೆ. ಆದರೆ ಗಾಂಧಿಯು ಹೇಳಿದಂತೆ ಆಯುರ್ವೇದಿಕ್ ಔಷಧ ಮತ್ತು ವಿಶ್ವೇಶ್ವರಯ್ಯ ಅವರ ಆಧುನಿಕತೆಯ ಆಸ್ಪತ್ರೆಗಳು, ಸುಲಿಗೆಯಂತಹ ಪ್ರಕರಣಕ್ಕೆ ಒಳಗಾಗಿವೆ. ಅಲ್ಲದೆ ಇಂದು ಆರೋಗ್ಯವನ್ನು ಸುಧಾರಿಸಲು ಸಾರ್ವಜನಿಕ ರಂಗದಂತೆ ಖಾಸಗೀ

ಆಸ್ಪತ್ರೆಗಳು ಬೆಳೆಯುತ್ತಿವೆ. ಹೀಗಾಗಿ ಸಾಮಾನ್ಯ ಜನರು ಖಾಸಗೀ ಆಸ್ಪತ್ರೆಗಳಲ್ಲಿ ಸೌಲಭ್ಯವನ್ನು ಪಡೆಯಲು ವಂಚಿತರಾಗಿ ಶ್ರೀಮಂತರೇ ಹೆಚ್ಚು ಸೌಲಭ್ಯವನ್ನು ಪಡೆಯುತ್ತಿದ್ದಾರೆ. ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದಿಸುವ ಔಷಧಗಳು ದುಬಾರಿಯಾಗಿದ್ದು, ಬಡಜನರು ಕೊಂಡುಕೊಳ್ಳುವ ಶಕ್ತಿ ಇಲ್ಲದಂತಾಗಿದೆ. ಇದಲ್ಲದೇ ಗಾಂಧಿ ಅವರು ಹೇಳಿದಂತೆ ವೈದ್ಯರು ಹಳ್ಳಿಗಳಿಗೆ ಹೋಗಿ ಸೇವೆಯನ್ನು ಸರಿಯಾಗಿ ಮಾಡುತ್ತಿಲ್ಲ. ವಿಶ್ವೇಶ್ವರಯ್ಯ ಅವರು ಗುರುತಿಸಿದಂತೆ ಸಾರ್ವಜನಿಕ ಆರೋಗ್ಯಕೇಂದ್ರಗಳಲ್ಲೂ ಪ್ರಮಾಣಿಕವಾಗಿ ಸೇವೆ ಮಾಡುತ್ತಿಲ್ಲ. ಬದಲಾಗಿ ವೈದ್ಯರುಗಳು ಸ್ವಾರ್ಥಿಗಳಾಗಿ ರೋಗಿಗಳ ಸುಲಿಗೆಗೆ ಕೈಹಾಕುತ್ತಿದ್ದಾರೆ. ಅಲ್ಲದೆ ಈ ಜಾಗತೀಕರಣ ಮತ್ತು ಪ್ರವಾಸಿಗಳ ಆಗಮನದ ಪ್ರಕ್ರಿಯೆಯಿಂದ ಭಾರತಕ್ಕೆ ಹೆಚ್ಚು ಸೋಂಕು ರೋಗಗಳು ಪಾಶ್ಚಾತ್ಯ ರಾಷ್ಟ್ರಗಳಿಂದ ಹರಡಿಕೊಂಡಿವೆ. ಪಾಶ್ಚಾತ್ಯ ರಾಷ್ಟ್ರಗಳಿಂದ ಬರುವ ಜನರು ಇಲ್ಲಿ ಏಡ್ಸ್ ಎಂಬ ಮಾರಕ ಸೋಂಕು ರೋಗಗಳನ್ನು ಹರಡುತ್ತಿದ್ದಾರೆ. ಇದು ಅತ್ಯಂತ ಪ್ರಬಲವಾದ ಸೋಂಕು ರೋಗವಾಗಿದ್ದು, ಮಾನವನ ಬದುಕನ್ನೇ ನಾಶ ಮಾಡುವ ಶಕ್ತಿಯನ್ನು ಪಡೆದಿದೆ. ಈ ಹಿನ್ನೆಲೆಯಲ್ಲಿ ಗಾಂಧಿ ಅವರ ಆಯುರ್ವೇದಿಕ್ ಮತ್ತು ವಿಶ್ವೇಶ್ವರಯ್ಯ ಅವರ ಆಧುನಿಕ ಶಸ್ತ್ರ ಚಿಕಿತ್ಸೆಯಿಂದಲೂ ಗುಣಪಡಿಸಲು ಸಾಧ್ಯವಾಗುತ್ತಿಲ್ಲ.

ಗ್ರಾಮೀಣ ಜನರ ಶಿಕ್ಷಣವನ್ನು ಸುಧಾರಿಸಲು ವಿದೇಶಿ ನೆರವು, ಅನುಧಾನಗಳು ದೊರೆಯುತ್ತಿವೆ. ಇದರಿಂದ ಪ್ರಾಥಮಿಕ ಶಿಕ್ಷಣವನ್ನು ಎಲ್ಲ ಜನರಿಗೂ ತಲುಪಿಸುವಂತೆ ಮಾಡಲು ಪ್ರಯತ್ನಿಸಲಾಗುತ್ತಿದೆ. ಅದರಲ್ಲೂ ಇತ್ತೀಚಿನ ದಿನಗಳಲ್ಲಿ ಕರ್ನಾಟಕವು ಪ್ರಾಥಮಿಕ ಶಿಕ್ಷಣವನ್ನು ಸುಧಾರಿಸಲು ಎರಡು ಸಾವಿರ (೨೦೦೦) ಕೋಟಿ ರೂ.ಗಳನ್ನು ವಿದೇಶಗಳಿಂದ ಪಡೆದಿದೆ. ಆದರೆ ಇದರಿಂದಾಗಿಯೂ ಎಲ್ಲಾ ಗ್ರಾಮೀಣ ಜನರಿಗೆ ಸರಿಯಾದ ಶಿಕ್ಷಣ ವ್ಯವಸ್ಥೆ ದೊರೆಯುತ್ತಿಲ್ಲ ಎನ್ನಬಹುದು. ಇಂದು ಖಾಸಗಿ ವಿದ್ಯಾಸಂಸ್ಥೆಗಳು ಹೆಚ್ಚು ಹೆಚ್ಚು ಅಭಿವೃದ್ಧಿಯಾಗುತ್ತಿವೆ. ಈ ಹಿನ್ನೆಲೆಯಲ್ಲಿ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರು ಮಾತೃಭಾಷೆಗೆ ಕೊಟ್ಟಿದ್ದ ಶಿಕ್ಷಣದ ಪ್ರಾಮುಖ್ಯತೆ ಕಳೆದುಕೊಳ್ಳುತ್ತಿದೆ. ವಿಶ್ವೇಶ್ವರಯ್ಯ ಅವರು ಉನ್ನತ ಶಿಕ್ಷಣಕ್ಕಾಗಿ ೧೯೧೬ ಜುಲೈ ೧ರಂದು ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದರು.[೯] ಅಲ್ಲದೆ ಅವರು ೧೯೧೩ರಲ್ಲಿ ಮೆಕಾನಿಕಲ್ ಇಂಜನಿಯರಿಂಗ್ ಕಾಲೇಜ್, ೧೯೧೭ರಲ್ಲಿ ಬೆಂಗಳೂರಿನಲ್ಲಿ ಇಂಜನಿಯರ್ ಕಾಲೇಜ್‌ಗಳು ಸರ್ಕಾರದ ವತಿಯಿಂದ ಸ್ಥಾಪಿಸಿದರು.[೧೦] ಅವರಂತೆ ಗಾಂಧಿಯವರು ಉನ್ನತ ಶಿಕ್ಷಣವನ್ನು ಖಾಸಗೀ ಕೈಗಾರಿಕೆಗಳು ಸ್ಥಾಪಿಸುವ ಸಂಸ್ಥೆಗಳನ್ನು ಸರ್ಕಾರವು ಸ್ಥಾಪಿಸಬಾರದೆಂದು ಹೇಳಿದ್ದರು.[೧೧] ಆದರೆ ಈ ತಾಂತ್ರಿಕ ಮತ್ತು ಉನ್ನತ ಶಿಕ್ಷಣ ಸಂಸ್ಥೆಗಳು ನಗರ ಪ್ರದೇಶಗಳಲ್ಲಿ ಸ್ಥಾಪನೆಗೊಂಡಿವೆ. ಅಲ್ಲದೆ ಶಿಕ್ಷಣ ವ್ಯವಸ್ಥೆಯೇ ಖಾಸಗೀಕರಣವಾಗುತ್ತಿರುವುದರಿಂದ ಗ್ರಾಮೀಣ ಜನರಿಗೆ ಉನ್ನತ ಶಿಕ್ಷಣ ಪಡೆಯುವುದಕ್ಕೆ ಸಾಧ್ಯವಾಗುತ್ತಿಲ್ಲ. ಅವರು ಅನುಸರಿಸುತ್ತಿರುವ ಪೇಮೆಂಟ್ ಕೋಟಾ ಪದ್ಧತಿಯು ಸಾಮಾನ್ಯ ಜನರಿಗೆ ಕೈಗೆಟುಕದ ಮಾತಾಗಿದೆ. ಅಲ್ಲದೇ ಉನ್ನತ

ಶಿಕ್ಷಣ ಪಡೆಯುವುದಕ್ಕೆ ವಿದೇಶಗಳಿಂದ, ಭಾರತಕ್ಕೆ ವಿದ್ಯಾರ್ಥಿಗಳ ದಂಡೆ ಹರಿದುಬರುತ್ತಿದೆ. ಇವರು ಎಷ್ಟೇ ಡೋನೇಷನ್ ವಂತಿಗೆ ಕೊಟ್ಟು ಶಿಕ್ಷಣ ಪಡೆಯಲು ಸಮರ್ಥರು. ಹೀಗಾಗಿ ಶಿಕ್ಷಣ ವ್ಯವಸ್ಥೆಯೇ ಇಂದು ವ್ಯಾಪಾರಿ ಮಾರುಕಟ್ಟೆಯಾಗಿ ಪರಿಣಮಿಸಿದೆ.

ಖಾಸಗೀಕರಣವೆಂದರೆ ಸಾರ್ವಜನಿಕ ಉದ್ದಿಮೆ, ಸಂಸ್ಥೆಗಳನ್ನು ಖಾಸಗೀ ವ್ಯಕ್ತಿಗಳ ಒಡೆತನಕ್ಕೆ ಒಪ್ಪಿಸುವುದು. ಅವರು ತಮಗೆ ಅವಶ್ಯಕವಿರುವ ಕೈಗಾರಿಕೆಗಳನ್ನು ಸ್ಥಾಪಿಸಿಕೊಂಡು ಹೆಚ್ಚಿನ ಲಾಭಪಡೆದುಕೊಳ್ಳುತ್ತಾರೆ. ಆರ್ಥಿಕ ಅಭಿವೃದ್ಧಿಯ ಸಲುವಾಗಿ ಜಾಗತೀಕರಣಕ್ಕೆ ಒಳಪಟ್ಟ ಭಾರತವು ಇಂದು ಉದಾರೀಕರಣ ಮತ್ತು ಖಾಸಗೀಕರಣ ನೀತಿಯನ್ನು ಅನುಸರಿಸುತ್ತಿವೆ. ಇದರಿಂದ ನವವಸಾಹತುಶಾಹಿ ಸೋಗಿನಲ್ಲಿರುವ ರಾಷ್ಟ್ರಗಳಿಂದ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ಇಂದು ಬಂಡವಾಳ ಹೂಡತೊಡಗಿವೆ. ಇವುಗಳ ಪ್ರಧಾನ ಆಶಯ ಅಧಿಕ ಬಂಡವಾಳ ಹೂಡಿ ಅಧಿಕ ಲಾಭಗಳಿಸುವುದಾಗಿದೆ. ಭಾರತವು ಸಾರ್ವಜನಿಕ ಸಂಸ್ಥೆಗಳಾದ ಬ್ಯಾಂಕ್‌ಗಳು, ಕೈಗಾರಿಕೆಗಳು. ವಿದ್ಯುತ್ ನಿಗಮ, ಸಾರಿಗೆ ಸಂಪರ್ಕ, ಶಿಕ್ಷಣ, ಆರೋಗ್ಯ ಇನ್ನು ಮುಂತಾದವುಗಳನ್ನು ಖಾಸಗೀಕರಣ ಮಾಡಿದೆ. ಇದರಿಂದ ಅನೇಕ ರಂಗಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಏಕಸ್ವಾಮ್ಯತೆ ಪಡೆದಿವೆ.

ಬಹುರಾಷ್ಟ್ರೀಯ ಕಂಪನಿಗಳು ಹೆಚ್ಚು ಬಂಡವಾಳ ಹೂಡಿ ಹೆಚ್ಚಿನ ಲಾಭಗಳಿಸಲು ಏಕಮೇವ ಉದ್ದೇಶವನ್ನು ಹೊಂದಿವೆ. ಅಲ್ಲದೆ ಎಲ್ಲ ಕ್ಷೇತ್ರಗಳಲ್ಲಿಯೂ ತಾಂತ್ರಿಕತೆ ಮತ್ತು ಕಂಪ್ಯೂಟರ್‌ಗಳ ಅಳವಡಿಕೆ ಹೆಚ್ಚಾಗಿದೆ. ಆದರೆ ಭಾರತದ ಗ್ರಾಮೀಣ ಮತ್ತು ಸಣ್ಣಕೈಗಾರಿಕೆಗಳು ನಾಶವಾಗತೊಡಗಿವೆ. ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳಿಗೆ ವಿದ್ಯುತ್ ಸೌಲಭ್ಯವನ್ನು ಕಲ್ಪಿಸಿಕೊಡುವುದರಿಂದ ಗ್ರಾಮೀಣ ಜನರಿಗೆ ವಿದ್ಯುತ್ ಸೌಲಭ್ಯ ದೊರೆಯುತ್ತಿಲ್ಲ. ಅಲ್ಲದೆ ಗ್ರಾಮೀಣ ಪ್ರದೇಶದ ರೈತರು, ಅಳವಡಿಸಿರುವ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸೌಲಭ್ಯ ದೊರೆಯದೆ ಲೋಡ್‌ಶೆಡ್ಡಿಂಗ್‌ನಿಂದ ಬೆಳೆಗಳು ನಾಶವಾಗಿ, ಸಾಲಗಾರರಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಹಂತವನ್ನು ತಲುಪಿದ್ದಾರೆ.

ಬಹುರಾಷ್ಟ್ರೀಯ ಕಂಪನಿಗಳ ಸ್ಪರ್ಧೆಯನ್ನು ಎದುರಿಸಲಾಗದ ಸಣ್ಣ ಹಾಗೂ ಬೃಹತ್ ಕೈಗಾರಿಕೆಗಳು ನಾಶಹೊಂದಿ ಮುಚ್ಚುವ ಹಂತವನ್ನು ತಲುಪಿವೆ. ನಿರುದ್ಯೋಗದ ಸಮಸ್ಯೆಯು ಸಹ ಬಹಳ ಉಲ್ಬಣಗೊಂಡಿದೆ. ಗಾಂಧಿಯವರು ಪ್ರೋತ್ಸಾಹಿಸಿದ ನೂಲುವ, ನೇಯುವಂಥ ಹಲವು ಗ್ರಾಮೀಣ ಕೈಗಾರಿಕೆಗಳು ಕಣ್ಮರೆಯಾಗುತ್ತಿವೆ. ಅಲ್ಲದೆ ಕೈಮಗ್ಗಗಳು ಗ್ರಾಮೀಣ ಜನರ ಕೈಕಸಬುಗಳು ಬಹುರಾಷ್ಟ್ರೀಯ ಕಂಪನಿಗಳಿಂದ ಉತ್ಪಾದನೆಯ ಭರಾಟೆಯಲ್ಲಿ ನಿರುದ್ಯೋಗವನ್ನು ಸೃಷ್ಟಿಮಾಡುತ್ತಿವೆ. ಅವರಂತೆ ವಿಶ್ವೇಶ್ವರಯ್ಯನವರು ಸರ್ಕಾರ, ಕೈಗಾರಿಕೆಗಳನ್ನು ಸ್ಥಾಪಿಸುವುದರ ಜೊತೆಗೆ ಖಾಸಗಿ ಸಾಹಸಿಗಳಿಗೂ ಹೆಚ್ಚಿನ ನೆರವು ನೀಡಬೇಕೆಂದು ಅಭಿಪ್ರಾಯಪಟ್ಟಿದ್ದರು.[೨] ಹೀಗಾಗಿ ಇಂದು ಬಹುರಾಷ್ಟ್ರೀಯ ಕಂಪನಿಗಳು ಕೈಗಾರಿಕೆಗಳನ್ನು ಸ್ಥಾಪಿಸಿ ಹೆಚ್ಚು ಲಾಭ ಪಡೆಯಲು ತಾಂತ್ರಿಕತೆಯನ್ನು

ಅಳವಡಿಸಿಕೊಳ್ಳುತ್ತಿವೆ. ಇದರಿಂದಾಗಿ ಉದ್ಯೋಗದ ಸೃಷ್ಟಿಯು ಆಗುತ್ತಿಲ್ಲ. ನಿರುದ್ಯೋಗದ ಸಮಸ್ಯೆಯೂ ದಿನೇ ದಿನೇ ಬೆಳೆಯುತ್ತಿವೆ. ಅಲ್ಲದೆ ಗ್ರಾಮೀಣ ಜನರ ಕೈಕಸಬುಗಳನ್ನು ಕಸಿದುಕೊಂಡ ಬಹುರಾಷ್ಟ್ರೀಯ ಅಥವಾ ನವವಸಾಹತುಶಾಹಿ ರಾಷ್ಟ್ರಗಳ ಕಂಪನಿಗಳು, ಹೆಚ್ಚು ಅಭಿವೃದ್ಧಿ ಹೊಂದುತ್ತಿದ್ದರೆ, ಗ್ರಾಮೀಣ ಜನರು ಉದ್ಯೋಗವನ್ನು ಹರಸುತ್ತಾ ನಗರ-ಪಟ್ಟಣಗಳಿಗೆ ತಲುಪುವವರಾಗಿದ್ದಾರೆ. ಅವರು ಈ ನಗರ-ಪಟ್ಟಣಗಳಲ್ಲಿ ಶೋಷಣೆಗೆ ಒಳಗಾಗಿ, ತಮ್ಮ ಜೀವನಸ್ಥಿತಿಯನ್ನು ಚಿಂತಾಜನಕವಾಗಿಸಿಕೊಂಡಿದ್ದಾರೆ.

ಇತ್ತೀಚಿಗೆ ಖ್ಯಾತಸಾಹಿತಿ ಹಾಗೂ ಚಿಂತಕರಾದ ಯು.ಆರ್.ಅನಂತಮೂರ್ತಿ ಅವರು ತುಮಕೂರಿನಲ್ಲಿ ನಡೆದ ಅಖಿಲ ಭಾರತದ ೬೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ತಮ್ಮ ಅಧ್ಯಕ್ಷೀಯ ಭಾಷಣದಲ್ಲೂ ಜಾಗತೀಕರಣದ ಆತಂಕಗಳನ್ನು ಮನವರಿಕೆ ಮಾಡಿಕೊಟ್ಟದ್ದನ್ನು ಇಲ್ಲಿ ನೆನಪಿಸಿಕೊಳ್ಳ ಬಹುದು. ಅಲ್ಲಿ ಅವರು-

> "ಜಾಗತೀಕರಣದ ಈ ದಿನಗಳಲ್ಲಿ ಸರ್ಕಾರಿ ಉದ್ಯೋಗಾವಕಾಶ ತುಂಬ ಕಮ್ಮಿಯಾಗು ತ್ತಿದೆ.ಮೀಸಲಾತಿ ಮುಖೇನ ನಮ್ಮ ಸಮಾನತೆಯ ಹಸಿವನ್ನು ಪೂರೈಸುವ ಅವಕಾಶಗಳು ಕ್ರಮೇಣ ಇಲ್ಲವಾಗುತ್ತಿವೆ. ಬಡವರು ಇನ್ನು ದಿಕ್ಕುಕೆಟ್ಟ ಬಡವರಾಗುತ್ತಾ ಹೋಗುವ ಸಮಾಜದಲ್ಲಿ ಸಂಪತ್ತನ್ನು ಯಾರಿಗಾಗಿ ನಾವು ಸೃಷ್ಟಿಸಬೇಕು. ಆದ್ದರಿಂದ ಸರ್ಕಾರದ ಕೆಲಸಗಳಿಗೆ ಅನ್ವಯಿಸುವ ಮೀಸಲಾತಿ ಎಲ್ಲಾ ಬಹುರಾಷ್ಟ್ರೀಯ ಸಂಸ್ಥೆಗಳಿಗೂ ಅನ್ವಯಿಸಬೇಕು. ಪ್ರೆಸಿಡೆಂಟ್ ಕೆನಡಿ ಕಪ್ಪು ಜನರಿಗೆ ಇಂಥ ಮೀಸಲಾತಿಯನ್ನು ಕಡ್ಡಾಯ ಮಾಡಿದ್ದ ಎಂದು ನಾನು ಕೇಳಿದ್ದೇನೆ."[೧೫]

-ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಖಾಸಗಿ ಕಂಪನಿಗಳಲ್ಲೂ ಇಂದು ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿಕೊಡಬೇಕೆಂಬ ವಾದ ಎಲ್ಲೇಡೆ ಕೇಳಿಬರುತ್ತಿದೆ. ಏಕೆಂದರೆ ಸರ್ಕಾರವು ಎಲ್ಲಾ ರಂಗದಲ್ಲೂ ಈ ಜಾಗತೀಕರಣಕ್ಕೆ ಒಳಪಟ್ಟು ಸಾರ್ವಜನಿಕ ಉದ್ಯಮಗಳು ಖಾಸಗಿಕರಣವಾಗಿವೆ. ಹೀಗಾಗಿ ಅಲ್ಲಿಯೂ ಮೀಸಲಾತಿಯ ಸೌಲಭ್ಯ ದೊರೆತರೆ ಎಲ್ಲ ವರ್ಗದ ಬಡವರಿಗೆ ಉತ್ತಮ ಅವಕಾಶವನ್ನು ನಿರೀಕ್ಷಿಸಬಹುದು.

ಈ ಬಹುರಾಷ್ಟ್ರೀಯ ಕಂಪನಿಗಳು ಸ್ಥಾಪನೆಯಾಗಿದ್ದರಿಂದ ನಮ್ಮ ಪರಿಸರ, ನದಿಗಳು, ಬೆಟ್ಟಗಳು ಮಾಲಿನ್ಯಗೊಂಡಿವೆ. ನದಿಗಳಂತೂ ಕೊಳಚೆಯ ನೀರಾಗಿ ಪರಿವರ್ತನೆಗೊಳ್ಳುತ್ತಿವೆ. ಅಲ್ಲದೆ ಈ ಕಂಪನಿಗಳು ಹೊರಬಿಡುತ್ತಿರುವ ವಿಷ ಅನಿಲದಿಂದಲ್ಲೂ ಪರಿಸರ ನಾಶವಾಗುವುದರ ಜೊತೆಗೆ ಜನರ ಆರೋಗ್ಯವು, ಜೀವನವು, ಅಸ್ತವ್ಯಸ್ಥಗೊಂಡಿದೆ. ಇದಲ್ಲದೆ ಓಝೋನ್ ಪದರವು ದಿನೇ ದಿನೇ ನಾಶವಾಗುತ್ತಿದೆ. ಇದನ್ನು ರಕ್ಷಿಸದ್ದಿದರೆ ನಾವು ಸಹ ನಾಶವಾಗುವ ಸಂಭವ ಉಂಟು. ಈ ನವವಸಾಹತುಶಾಹಿ ರಾಷ್ಟ್ರವಾದ ಅಮೇರಿಕಾ ಮತ್ತು ಮಿತ್ರರಾಷ್ಟ್ರಗಳು ಬಹುರಾಷ್ಟ್ರೀಯ ಕಂಪನಿಗಳಿಂದ ನಮ್ಮನ್ನು ಗುಲಾಮರನ್ನಾಗಿ ಮಾಡುವ ಸಂಭವಗಳು ದಿನೇ ದಿನೇ ಹೆಚ್ಚಾಗುತ್ತಿವೆ.

ಭಾರತವು ಇಂದು ಅತ್ಯಾಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡು, ಅತ್ಯಾಧುನಿಕ ಯುದ್ಧ ಸಾಮಗ್ರಿಗಳನ್ನು ಉತ್ಪಾದನೆ ಮಾಡುತ್ತಿದೆ. ಅಲ್ಲದೆ ೧೯೯೮ರಲ್ಲಿ ನಡೆಸಿದ ಅಣ್ವಸ್ತ್ರ ಪ್ರಯೋಗದಿಂದ

ಅಂತರರಾಷ್ಟ್ರೀಯ ಮಟ್ಟದಲ್ಲಿ ಅಣ್ವಸ್ತ್ರ ಪಡೆದ ರಾಷ್ಟ್ರ ಎಂಬ ಖ್ಯಾತಿ ಪಡೆದಿದೆ. ಇಂದು ಜಲಾಂತರ್ಗಾಮಿ, ಅತ್ಯಾಧುನಿಕ ಟ್ಯಾಂಕರುಗಳು, ಕ್ಷಿಪಣಿಗಳ ಉತ್ಪಾದನೆ, ಬಾಹ್ಯಾಕಾಶ ಪ್ರಯೋಗಗಳು ಇನ್ನು ಮುಂತಾದವು ಉತ್ಪಾದನೆಯಾಗುತ್ತಿವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಅತ್ಯಾಧುನಿಕ ಯುದ್ಧ ಸಾಮಗ್ರಿಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುತ್ತಿದೆ. ಅಲ್ಲದೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಒಪ್ಪಂದಗಳನ್ನು ಮಾಡಿಕೊಂಡು ಜಂಟಿಯಾಗಿ ಯುದ್ಧ ಸಾಮಗ್ರಿಗಳನ್ನು ಉತ್ಪಾದನೆ ಮಾಡತೊಡಗಿದೆ. ಇದರಿಂದಾಗಿ ಸ್ವದೇಶಿ ನೀತಿಯು ಈ ಜಾಗತೀಕರಣದಿಂದ ಹೊರಬಂದಿದೆ ಎನ್ನಬಹುದು.

ಗಾಂಧಿಯವರು ಚಿಂತಿಸಿದ್ದ ಧಾರ್ಮಿಕ ಮನೋಭಾವನೆಯು ಈ ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿ ಭಾರತೀಯರ ಸಾಂಸ್ಕೃತಿಕ ಚಟುವಟಿಕೆಗಳಿಗೂ ಬಾರಿ ಹೊಡೆತ ಕೊಟ್ಟಿದೆ. ಇದಲ್ಲದೆ ಎಲ್ಲಾ ರಂಗದಲ್ಲಿ ಹಿಂದುಳಿಯುತ್ತಿರುವುದನ್ನು ನೋಡಬಹುದು. ಆದರೂ ಸಹ ಕೆಲವೊಂದು ಕ್ಷೇತ್ರಗಳಲ್ಲಿ ಮಾತ್ರ ಹೆಚ್ಚು ಅಭಿವೃದ್ಧಿಯನ್ನು ಸಾಧಿಸುತ್ತಿದೆ. ಜಾಗತೀಕರಣದಿಂದ ಭಾರತವು ನರಳುವ ಸ್ಥಿತಿ ತಲುಪಿದೆ. ಈ ಹಿನ್ನೆಲೆಯಲ್ಲಿ ಜಾಗತೀಕರಣದ ಪ್ರಕ್ರಿಯೆಯಲ್ಲಿ ಅಂದು ಚಿಂತಿಸಿದ ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರ ಚಿಂತನೆಗಳು ವಿರೋಧಭಾಸಗಳಿಂದ ಕೂಡಿವೆ ಎಂದು ಹೇಳಬಹುದಾಗಿದೆ. ಆದರೂ ಸಹ ಇಂದು ಇವರಿಬ್ಬರ ತತ್ವಗಳನ್ನು ಸಮರ್ಪಕವಾಗಿ ಪಾಲಿಸಿದರೆ ದೇಶ ಎಲ್ಲಾ ರಂಗದಲ್ಲೂ ಅಭಿವೃದ್ಧಿಯಾಗಬಹುದು. ಹೀಗಾಗಿ ಅವರಿಬ್ಬರ ತತ್ವಗಳು ಇಂದಿಗೂ ಸಹ ಕೈಬಿಡಲು ಸಾಧ್ಯ ಆಗುವುದಿಲ್ಲ.

**ಟಿಪ್ಪಣಿಗಳು**

೧. **ಮೊಗಳ್ಳಿ ಗಣೇಶ, (೧೯೯೯), ದಲಿತರು ಮತ್ತು ಜಾಗತೀಕರಣ,** ಪು. ೧೦.

೨. ಅದೇ, ಪು. ೧೧.

೩. ಅದೇ, ಪು. ೧೨.

೪. ಅದೇ, ಪು. ೧೮.

೫. Thamanna Gowda [Secretary)(2001), Karnataka journal of Politics, P.13.

೬. ಅದೇ, ಪು. ೧೩.

೭. ಅನಂತಮೂರ್ತಿ ಯು.ಆರ್. (೨೦೦೨), ಅಖಿಲ ಭಾರತದ ೬೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು, ಪು.೮.

೮. ಜಯಪ್ಪಗೌಡ ಡಿ.ಎಸ್. (೧೯೯೪), ದಿವಾನ್ ಸರ್.ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು, ಪು. ೧೭೨-೧೭೩

೯. ಜಯಪ್ಪಗೌಡ ಡಿ.ಎಸ್.(೧೯೯೪), ಅದೇ, ಪು.೧೦೮

೧೦. ಅದೇ, ಪು. ೧೧೬-೧೧೮

೧೧. ನರಸಿಂಹಸ್ವಾಮಿ ಕೆ.ಎಸ್.(೧೯೭೧), ನನ್ನ ಕನಸಿನ ಭಾರತದ, ಪು. ೨೦೦

೧೨. ಜಯಪ್ಪಗೌಡ ಡಿ.ಎಸ್. (೧೯೯೪), ಅದೇ, ಪು. ೧೪೯

೧೩. ಅನಂತಮೂರ್ತಿ ಯು.ಆರ್.(೨೦೦೨), ಅದೇ, ಪು. ೩೬

ಪ್ರಸುತ್ತ ಅಧ್ಯಯನವು ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರ ಚಿಂತನೆಗಳ ಒಂದು ತೌಲನಿಕ ಅಧ್ಯಯನ. ಇವರಿಬ್ಬರ ಚಿಂತನೆಗಳನ್ನು, ಅಭಿಪ್ರಾಯಗಳನ್ನು ಮತ್ತು ಕೆಲಸ ಕಾರ್ಯಗಳನ್ನು ಹೋಲಿಕೆ ಮಾಡಲಾಗಿದೆ. ಈ ಅಧ್ಯಯನದಿಂದ ಇವರಿಬ್ಬರ ಚಿಂತನೆಗಳು ಇಂದಿನ ಪರಿಸ್ಥಿತಿಗೆ ಒಂದಲ್ಲಾ, ಒಂದು ರೀತಿಯಲ್ಲಿ ಪ್ರಸ್ತುತವಾಗುತ್ತವೆ ಎಂಬುದನ್ನು ಅರಿಯಲಾಗಿದೆ. ಗಾಂಧಿ ಅವರು ರಾಷ್ಟ್ರಮಟ್ಟದಲ್ಲಿ ಚಿಂತಿಸಿದರೆ, ವಿಶ್ವೇಶ್ವರಯ್ಯನವರು ಸಂಸ್ಥಾನದ ಮಟ್ಟದಲ್ಲಿ ಚಿಂತಿಸಿದವರು. ಇವರಿಬ್ಬರಲ್ಲಿಯು ಅಜಗಜಾಂತರ ವ್ಯತ್ಯಾಸ, ಭಿನ್ನಾಭಿಪ್ರಾಯಗಳಿದ್ದರೂ ಸಹ ಅವರ ಚಿಂತನೆಗಳು ದೇಶದ ಪ್ರಗತಿಯ ವಿಚಾರಗಳಲ್ಲಿ ರಾಜಿ ಮಾಡಿಕೊಳ್ಳುವಂಥವಲ್ಲ.

ವಿಶ್ವೇಶ್ವರಯ್ಯ ಮತ್ತು ಗಾಂಧಿ ಅವರು ಭಿನ್ನ ಸಂಸ್ಥಾನಗಳಲ್ಲಿ ಹುಟ್ಟಿದರೂ ಸಹ ಜಾಗತಿಕ ಮಟ್ಟದಲ್ಲಿ ತಮ್ಮ ಪ್ರಭಾವ ಬೀರಿದವರು. ಗಾಂಧಿ ಅವರು ಇಡೀ ವಿಶ್ವದಲ್ಲೇ ಮಾನವೀಯತೆಯನ್ನು ಮೆರೆದವರು. ಅವರು ಮರಣ ಹೊಂದಿದಾಗ ವಿಶ್ವಸಂಸ್ಥೆಯೇ ಬಾವುಟವನ್ನು ಅರ್ಧಮಟ್ಟಕ್ಕೆ ಇಳಿಸಿ ಗೌರವ ಸಲ್ಲಿಸಿದ್ದುಂಟು. ಆದರೆ ವಿಶ್ವೇಶ್ವರಯ್ಯನವರು ಗಾಂಧಿ ಅವರಂತೆ ಹೆಚ್ಚು ಪ್ರಭಾವ ಬೀರದಿದ್ದರೂ ಸಹ ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿಗಳಿಸಿದವರು. ಗಾಂಧಿ ಅವರು ಅಂದು ಗಳಿಸಿದ್ದ ಪ್ರಭಾವ, ಮಾನ್ಯತೆಗಳಿಂದ ಯಾವುದಾದರೂ ಸಂಸ್ಥಾನದಲ್ಲೋ ಅಥವಾ ಸರ್ಕಾರದಲ್ಲೋ ತಮಗೆ ಬೇಕಾದ ಅಧಿಕಾರವನ್ನು ಪಡೆಯಬಹುದಾಗಿತ್ತು. ಆದರೆ ಅವರು ಯಾವುದೇ ಆಸೆ ಅಮೀಷಗಳಿಗೆ ಒಳಗಾದವರಲ್ಲ. ಬದಲಾಗಿ ಬಸವಣ್ಣನವರು ಬಿಜ್ಜಳನ ಆಸ್ಥಾನ ತೊರೆದು ಸಮಾಜ ಸುಧಾರಣೆಯಲ್ಲಿ ತೊಡಗಿಕೊಂಡಂತೆ. ಇವರು ಸಹ ಸಮಾಜ ಸೇವೆಯ ಜೊತೆಗೆ ದೇಶದ ಪ್ರಗತಿಗಾಗಿ ಶ್ರಮಿಸಿದವರು. ವಿಶ್ವೇಶ್ವರಯ್ಯ ಅವರು ಪ್ರಜಾಪ್ರಭುತ್ವ ಮಾದರಿ ಎನಿಸಿದ್ದ ಮೈಸೂರು ಸಂಸ್ಥಾನದಲ್ಲಿ ಎಂಜಿನಿಯರಾಗಿ ಅನಂತರ ದಿವಾನರಾದವರು. ಸ್ವತಂತ್ರವಾಗಿಯೇ ಆಡಳಿತವನ್ನು ನಡೆಸಲು ಬಯಸಿದವರು. ಇವರು ಮೈಸೂರು ಸಂಸ್ಥಾನದ ಪ್ರಗತಿಯ ಜೊತೆ ಜೊತೆಗೆ ರಾಷ್ಟ್ರದ ಇತರ ಸಂಸ್ಥಾನಗಳ ಪ್ರಗತಿಗೂ ಶ್ರಮಿಸಿದವರು.

ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರ ವ್ಯಕ್ತಿತ್ವಗಳನ್ನು ಗಮನಿಸಿದರೆ, ಪರಸ್ಪರ ಗೌರವವನ್ನು ಹೊಂದಿದ್ದರೆಂಬುದು ತಿಳಿದು ಬರುತ್ತದೆ. ಇವರಿಬ್ಬರಲ್ಲಿ ನೇರ ನುಡಿ, ನಿಷ್ಠುರತೆಗಳು ಅಭಿವ್ಯಕ್ತಗೊಂಡಿವೆ.

ಗಾಂಧಿ ತಮ್ಮಗಿಂತ ಯಾರು ಭಾರತದ ಗ್ರಾಮಗಳ ಸಮಸ್ಯೆಗಳನ್ನು ತಿಳಿದಿಲ್ಲವೆಂದಾಗ, ವಿಶ್ವೇಶ್ವರಯ್ಯ ಅವರು ನಾನು ನಿಮಗಿಂತ ಹತ್ತು ವರ್ಷ ದೊಡ್ಡವನೆಂದೂ, ನಿಮಗಿಂತ ಅನುಭವವುಳ್ಳವನೆಂದೂ ನೇರವಾಗಿ ತಿಳಿಸಿದ್ದರು. ಹೀಗಾಗಿ ಇನ್ನು ಅನೇಕ ವಿಚಾರಗಳಲ್ಲಿ ಭಿನ್ನಾಭಿಪ್ರಾಯಗಳಿದ್ದುದರಿಂದ ಇವರಿಬ್ಬರ ಮನಸ್ಸಿನಲ್ಲಿ ಶೀತಲ ಸಮರ ನಡೆಯುತ್ತಿತ್ತು. ಇವರಿಬ್ಬರು ತಮ್ಮತನವನ್ನು, ತತ್ತ್ವವನ್ನು ಬಿಟ್ಟುಕೊಡದ ಹಠವಾದಿಗಳು. ವಿಶ್ವೇಶ್ವರಯ್ಯನವರು ಗಾಂಧಿ ಅವರು ಪಡೆದಿದ್ದ ಪ್ರಖ್ಯಾತಿಯನ್ನು ಗಮನಿಸಿ ಹೆಚ್ಚಿನ ವಿರೋಧವನ್ನು ಕಟ್ಟಿಕೊಳ್ಳಲು ಬಯಸಿರಲಿಲ್ಲ. ಬದಲಾಗಿ ತಮ್ಮ ಕೆಲಸ, ಚಿಂತನೆಗಳಲ್ಲಿ ತಲ್ಲೀನರಾಗಿದ್ದರು.

ಗಾಂಧಿ ಅವರಿಗೆ ಮಿರ್ಜಾ ಇಸ್ಮಾಯಿಲ್ ಅವರ ಜೊತೆಗಿದ್ದ ಗಾಢವಾದ ಸಂಬಂಧವು, ವಿಶ್ವೇಶ್ವರಯ್ಯ ನವರಲ್ಲಿ ಇರಲಿಲ್ಲ. ಇದಕ್ಕೆ ಕಾರಣ ವಿಶ್ವೇಶ್ವರಯ್ಯ ಅವರ ನೇರವಾಗಿ ನುಡಿಯುತ್ತಿದ್ದುದ್ದಲ್ಲದೆ, ಗಾಂಧಿ ಅವರ ತತ್ತ್ವಗಳನ್ನು ವಿರೋಧಿಸುತ್ತಿದ್ದರು. ಗಾಂಧಿ ಅವರು ಅಖಿಲ ಭಾರತ ಗುಡಿಕೈಗಾರಿಕಾ ಸಂಘವನ್ನು ಸ್ಥಾಪಿಸಿ, ಅದಕ್ಕೆ ಸಲಹೆ ಕೊಡುವಂತೆ ವಿಶ್ವೇಶ್ವರಯ್ಯನವರನ್ನು ಕೋರಿಕೊಳ್ಳುತ್ತಾರೆ. ಇದಕ್ಕೆ ಪ್ರತಿಕ್ರಿಯಿಸಿದ ವಿಶ್ವೇಶ್ವರಯ್ಯ ಅವರು ರಷ್ಯದ ಕೈಗಾರಿಕಾ ಕ್ರಾಂತಿ ಮತ್ತು ಸ್ಟಾಲಿನ್‌ರವರ ಪುಸ್ತಕವನ್ನು ಕಳುಹಿಸಿ ಪ್ರತಿಕ್ರಿಯಿಸುತ್ತಾರೆ. ಅಲ್ಲದೆ ಗಾಂಧಿ ಅವರು ಯಂತ್ರದ ಬಗ್ಗೆ ವಿರೋಧಿಸುತ್ತಿ ದುದ್ದಕ್ಕಾಗಿ, 'ನಿಮ್ಮ ಹತ್ತಿರ ಕಾರು ಮತ್ತು ಎತ್ತಿನಗಾಡಿ ಇದೆ. ಆದರೆ ನೀವು ಕಾರನ್ನೇ ಬಳಸುತ್ತಿರಾ ಎಂದು ತಿಳಿಯುತ್ತೇನೆ' ಎಂದು ಉತ್ತರಿಸಿದರು. ಇದಕ್ಕೆ ಗಾಂಧಿ ಅವರು ಪ್ರಬಲವಾಗಿ ವಿಶ್ವೇಶ್ವರಯ್ಯ ನವರನ್ನು ವಿರೋಧಿಸುತ್ತಾರೆ. ತದನಂತರ ವಿಶ್ವೇಶ್ವರಯ್ಯನವರು ಗಾಂಧಿ ಅವರಿಗೆ ಕಾಗದವನ್ನು ಬರೆದು, ಇನ್ನು ಮುಂದೆ ಪತ್ರ ವ್ಯವಹಾರ ನಿಲ್ಲಿಸುವುದು ಸೂಕ್ತವೆಂದು ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ಇವರಿಬ್ಬರಲ್ಲಿ ಸಂಬಂಧವು ಉತ್ತಮವಾಗಲು ಸಾಧ್ಯವಾಗಲಿಲ್ಲ.

ಗಾಂಧಿ ಅವರು ತಮ್ಮ ಕಾಲದ ಸ್ಥಿತಿಗತಿಗಳನ್ನು ಅರಿತಿದ್ದರು. ಆಧುನಿಕತೆಯ ಭರಾಟೆಯನ್ನು ಅರಿತು ಅದನ್ನು ವಿರೋಧಿಸುತ್ತಿದುದ್ದುಂಟು. ಅಲ್ಲದೆ ಗಾಂಧಿಯವರು ಮೈಸೂರು ಸಂಸ್ಥಾನಕ್ಕೆ ಭೇಟಿ ನೀಡಿದ್ದಾಗ ತಮ್ಮ 'ರಾಮರಾಜ್ಯ'ದ ಕಲ್ಪನೆಯನ್ನೂ, ವಿಶ್ವೇಶ್ವರಯ್ಯನವರು ಆಧುನಿಕ ರೀತಿಯಲ್ಲಿ ಕೈಗೊಂಡಿದ್ದ ಕಾರ್ಯಗಳಿಂದ ತೃಪ್ತಿಗೊಂಡಿದ್ದರು. ಆದರೆ ಇಂದು ಗಾಂಧಿ ಅವರು ಭಾರತದ ಬಗ್ಗೆ ಕಂಡಿದ್ದ 'ಗ್ರಾಮ ಸ್ವರಾಜ್ಯ' ಮತ್ತು 'ರಾಮರಾಜ್ಯ'ದ ಕಲ್ಪನೆಯ ಕನಸು ಕನಸ್ಸಾಗಿಯೇ ಉಳಿಯುವಂತಾಗಿದೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ವಿಶ್ವೇಶ್ವರಯ್ಯ ಅವರು ಗ್ರಾಮಗಳ ಬಗ್ಗೆ ಚಿಂತಿಸಿದ ಹಾಗೂ ತೆಗೆದುಕೊಂಡ ನಿರ್ಣಯಗಳು ಫಲಪ್ರದವಾಗಿ ಮುಂದುವರೆದಿವೆ. ಅಲ್ಲದೆ ಇಂದಿನ ಜಾಗತೀಕರಣದ ಸನ್ನಿವೇಶವನ್ನು, ಅದರ ಸವಾಲುಗಳನ್ನೂ ಎದುರುಗೊಳ್ಳಲು ಸಹಕಾರಿಯೂ ಆಗಿದೆ. ಅಲ್ಲದೆ ಗಾಂಧಿ, ವಿಶ್ವೇಶ್ವರಯ್ಯನವರು ಯೋಜನೆ ಹಾಕಿ ಕೈಗೊಂಡಿದ್ದ ಕನ್ನಂಬಾಡಿ ಕಟ್ಟೆ ಮತ್ತು

ಭದ್ರಾವತಿ ಕಾರ್ಖಾನೆಯನ್ನು ಸಂದರ್ಶಿಸಿದರು. ಆಗ ಗಾಂಧಿ ಅವರು 'ನಾಳೆಯೇ ಭದ್ರಾವತಿ ಕಾರ್ಖಾನೆ ಮುಚ್ಚಿದರೂ ಸರಿಯೇ ಇದು ಭಾರತೀಯರಿಂದ ಸಾಧಿಸಿದ್ದು' ಎಂದರು. ಅಲ್ಲದೆ ಕನ್ನಂಬಾಡಿ ಕಟ್ಟೆಯು ಏಷ್ಯಾದಲ್ಲೇ ಅತಿ ದೊಡ್ಡ ಜಲಾಶಯವೆಂದು ವಿಶ್ವೇಶ್ವರಯ್ಯ ಅವರ ಕಾರ್ಯವೈಖರಿಯನ್ನು ಹೊಗಳಿದರು.

ಮೈಸೂರು ಸಂಸ್ಥಾನದಲ್ಲಿ ಮಿರ್ಜಾ ಇಸ್ಮಾಯಿಲ್ ಹದಿನೈದು ವರುಷಗಳ ಕಾಲ ದಿವಾನರಾಗಿದ್ದವರು. ಆದರೆ ವಿಶ್ವೇಶ್ವರಯ್ಯನವರು ಕೇವಲ ಆರು ವರ್ಷಗಳು ಮಾತ್ರ ದಿವಾನರಾಗಿದ್ದವರು. ವಿಶ್ವೇಶ್ವರಯ್ಯ ಅವರು ರಾಜೀನಾಮೆ ನೀಡಿದ್ದಕ್ಕೆ ಕಾರಣಗಳೇನು ಎಂಬುದರ ಬಗ್ಗೆ ಅನೇಕ ಅಂಶಗಳು ಕಾರಣವೆಂದು ಪ್ರತಿಪಾದಿತವಾಗಿವೆ. ಅವುಗಳಲ್ಲಿ ವಿಶ್ವೇಶ್ವರಯ್ಯ ಅವರ ವಿರುದ್ಧ ಯುವರಾಜರು ಅಸಮಧಾನ ಗೊಂಡಿದ್ದುದು, ರೆಸಿಡೆಂಟ್ ಮತ್ತು ಬ್ರಿಟಿಷ್ ಸರ್ಕಾರ ಇವರ ಅಭಿವೃದ್ಧಿ ಕಾರ್ಯಗಳನ್ನು ವಿರೋಧಿಸುತ್ತಿದ್ದುದು, ಮಹಾರಾಜರು ಮೀಸಲಾತಿಯ ಪರವಾಗಿದ್ದುದು ಮೊದಲಾದ ಅಂಶಗಳು ಪ್ರಧಾನವಾದವು. ಈ ಅಂಶಗಳು ಇನ್ನುಷ್ಟು ಆಳವಾಗಿ ಸಂಶೋಧನೆ ಆಗಬೇಕಿವೆ. ಅಲ್ಲದೆ ಅವರು ದಿವಾನ ಪದವಿಯನ್ನು ಪಡೆಯುವಾಗ ತಮ್ಮ ಸಂಬಂಧಿಗಳಿಗೆ ಕೆಲಸ ಅರಿಸಿಕೊಂಡು ಬರುವುದಾದರೆ, ತಮ್ಮ ಹುದ್ದೆಯನ್ನೆ ತ್ಯಜಿಸುವುದಾಗಿ ಹೇಳಿದ್ದರು. ಅದರಂತೆ ತಮ್ಮ ಸಂಬಂಧಿಗಳ ಪರವಾಗಿ ಯಾವುದೇ ಪಕ್ಷಪಾತವನ್ನು ಅಥವಾ ಯಾವ ಕಾರಣಕ್ಕೂ ಉದ್ಯೋಗಾವಕಾಶನ್ನಾಗಲಿ ಕಲ್ಪಿಸಿಕೊಡಲಿಲ್ಲ. ಆದರೆ ಮೀಸಲಾತಿಯ ವಿಚಾರದಲ್ಲಿ ಮಾತ್ರ ದಕ್ಷತೆ, ಯೋಗ್ಯತೆ ರಾಷ್ಟ್ರದ ಪ್ರಗತಿಗೆ ಪ್ರಧಾನವೆಂದು ಪರಿಗಣಿಸಿದ್ದ ಇವರು, ಯಾವ ಕಾರಣಕ್ಕಾಗಿ ಇತರೆ ಬ್ರಾಹ್ಮಣರನ್ನು ಅಂದರೆ ತಮ್ಮದೇ ಜಾತಿಯವರನ್ನು ಆಯ್ಕೆ ಮಾಡಿದರು ಎಂಬ ಪ್ರಶ್ನೆಗಳು ಕಾಡುತ್ತವೆ. ಬಹುಶಃ ಅಂದು ಬ್ರಾಹ್ಮಣರು ಮಾತ್ರ ಶಿಕ್ಷಣ, ಯೋಗ್ಯತೆ, ದಕ್ಷತೆಗಳನ್ನು ಹೊಂದಿದ್ದರು ಎಂಬ ಕಾರಣಕ್ಕಾಗಿ ಇರಬಹುದು. ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಎಚ್.ಜೆ. ಲಕ್ಕಪ್ಪಗೌಡ ಅವರು ಇತ್ತೀಚೆಗೆ ತಮ್ಮ ಭಾಷಣವೊಂದರಲ್ಲಿ ಇವರ ಬಗ್ಗೆ ಸೂಕ್ಷ್ಮವಾದ ಸಂಶೋಧನೆ ನಡೆಸಿದರೆ ಸೂಕ್ತ ಎಂದಿದ್ದಾರೆ. ಆಗ ಮಾತ್ರ ಅವರ ಮೇಲೆ ಹೊರಿಸಲಾಗಿರುವ ಹಲವು ಆರೋಪಗಳನ್ನು ಪರಿಶೀಲಿಸಿ ಸತ್ಯಾಂಶಗಳನ್ನು ಹೊರಗೆಡಹಲು ಸಾಧ್ಯ ಎಂಬುದು ಇವರ ಇಂಗಿತ.

ವಿಶ್ವೇಶ್ವರಯ್ಯನವರು ಸ್ವಾತಂತ್ರ್ಯ ಚಳವಳಿಯಲ್ಲಿ ನೇರವಾಗಿ ಭಾಗವಹಿಸಲಿಲ್ಲ. ಬದಲಾಗಿ ಅವರು ಸ್ವಾತಂತ್ರ್ಯವನ್ನು ದೇಶದ ಅಭಿವೃದ್ಧಿಯ ಜೊತೆಗೆ ಪಡೆಯುವುದು ಸೂಕ್ತವೆಂದು ಬಯಸುತ್ತಿದ್ದರು. ಗಾಂಧಿ ಅವರಂತೆ ವಿಶ್ವೇಶ್ವರಯ್ಯ ಅವರು ರಾಷ್ಟ್ರೀಯತೆ ಬಗ್ಗೆ ಮಾತನಾಡಿಲ್ಲ. ಹೀಗಾಗಿ ಅವರು ಕೈಗೊಂಡಿದ್ದ ಕೆಲಸ-ಕಾರ್ಯ, ಆಲೋಚನೆಗಳನ್ನೇ ಈ ದಿಸೆಯಲ್ಲಿ ಗುರುತಿಸಲಾಗಿದೆ.

ಜಾಗತೀಕರಣದ ಪರಿಕಲ್ಪನೆಯು ಎಲ್ಲ ದೇಶಗಳನ್ನು ತನ್ನ ಕಪಿಮುಷ್ಠಿಗೆ ಒಳಪಡಿಸಿಕೊಳ್ಳುತ್ತಿದೆ. ಹೀಗಾಗಿ ಈ ಪರಿಕಲ್ಪನೆಯಿಂದ ಯಾವ ದೇಶಗಳು ತಪ್ಪಿಸಿಕೊಳ್ಳಲು ಸಾಧ್ಯವಾಗಿಲ್ಲ. ಮೊದಲೇ ತಿಳಿಸಿದಂತೆ, ಚೀನಾವು ಸಹ ಇಂದು ಈ ಜಾಗತೀಕರಣ ಪರಿಕಲ್ಪನೆಗೆ ತನ್ನ ಬಾಗಿಲನ್ನು ತೆರೆದಿದೆ. ಆದ್ದರಿಂದ ಭಾರತವು ಸಹ ಹೊಸ ವಿಚಾರಗಳಾದ ವಿಜ್ಞಾನ-ತಂತ್ರಜ್ಞಾನ, ತಾಂತ್ರಿಕ ಶಿಕ್ಷಣ, ಕೈಗಾರಿಕಾ ಪ್ರಗತಿ ಮೊದಲಾದವುಗಳನ್ನು ಹೊಂದಲು ಸ್ವಾಗತಿಸಿದೆ. ಇಂಥ ಆಧುನಿಕತೆಯನ್ನು ಅಳವಡಿಸಿಕೊಂಡು ಪ್ರಗತಿ ಹೊಂದುವುದು ಅನಿವಾರ್ಯವು ಹೌದು. ಆದರೆ ಹೊಸ ವಿಚಾರಗಳನ್ನು, ಅನುಭವಗಳನ್ನು ಅನುಮಾನದಿಂದ ವಿರೋಧಿಸಿ, ತಮ್ಮ ಪರಂಪರೆ, ಸಂಸ್ಕೃತಿಯ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳುತ್ತೇವೆ ಎನ್ನುವುದು ಕಷ್ಟಸಾಧ್ಯ. ವಿಶ್ವದ ನಾಗರೀಕತೆಯೊಂದಿಗೆ ಹೊಂದಿಕೊಳ್ಳದ ಯಾವ ನಾಗರೀಕತೆಯು ಉಳಿಯುವುದಿಲ್ಲ ಎಂದು ಚರಿತ್ರೆ ಈಗಾಗಲೇ ಎಚ್ಚರಿಸಿದೆ. ಈ ಹಿನ್ನೆಲೆಯಲ್ಲಿ ಆಧುನಿಕತೆಗೆ ಒಳಗಾದ ನಾವು, ನಮ್ಮ ಸಂಸ್ಕೃತಿ, ಸಮಾಜದ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳುವುದು ಅತಿಮುಖ್ಯ ಮತ್ತು ಬುದ್ಧಿವಂತಿಕೆಯು ಕೂಡ. ಈ ನಿಟ್ಟಿನಲ್ಲಿ ಜನರು ಮತ್ತು ಸರ್ಕಾರವು ಎಚ್ಚೆತ್ತುಕೊಳ್ಳಬೇಕಾಗಿದೆ. ಈ ದಿಸೆಯಲ್ಲಿ ಎಂ. ವಿಶ್ವೇಶ್ವರಯ್ಯ ಅವರು ಅಂದೇ ತಮ್ಮ ವಿಚಾರಗಳು ಪ್ರಸ್ತಾಪಿಸಿದ್ದುದು ಮಹತ್ವಕರವಾದುದು.

ಹಿಂದೆ ವಸಾಹತುಶಾಹಿಗಳು ತಮ್ಮ ಕಬಂಧ ಬಾಹುಗಳನ್ನು ಪ್ರಪಂಚದದ್ಯಾಂತ ಹರಡಿದ್ದರು. ಆದರೆ ಇಂದು ನವವಸಾಹತುಶಾಹಿಯ ಸೋಗಿನಲ್ಲಿ ಪ್ರಮುಖವಾಗಿ ಇರುವ ಅಮೇರಿಕವು ತನ್ನ ಬಾಹು ಬಲವನ್ನು ಪ್ರದರ್ಶಿಸುತ್ತಿದೆ. ಅದು ಪ್ರಪಂಚದಲ್ಲಿ ತಾನೇ ಹಿರಿಯಣ್ಣನೆಂದೂ, ಸಮಸ್ಯೆಗಳನ್ನು ಪರಿಹರಿಸುವ ಸಾಮರ್ಥ್ಯ ಪಡೆದಿದೆ ಎಂದು ನಂಬಿಸುತ್ತಿದೆ. ಹೀಗಾಗಿ ಭಾರತವು ತನ್ನತನವನ್ನು ಕಾಯ್ದುಕೊಂಡು, ಎಚ್ಚರಿಕೆಯಿಂದ ಹೆಜ್ಜೆ ಇಡಬೇಕಾದ ಸನ್ನಿವೇಶ ನಿರ್ಮಾಣವಾಗಿದೆ. ಅಷ್ಟೇ ಅಲ್ಲದೆ ಭಾರತವು ಪ್ರತಿಯೊಂದು ವಿಷಯದಲ್ಲೂ ಅಲೋಚಿಸಿ ಸೂಕ್ತ ರೀತಿಯಲ್ಲಿ ತೀರ್ಮಾನ ತೆಗೆದುಕೊಳ್ಳಬೇಕಾಗಿದೆ. ಗಾಂಧಿ ಈ ಕಬಂಧ ಬಾಹುಗಳನ್ನು ಅಂದೇ ಅರಿತಿದ್ದರು.

ಈ ಜಾಗತೀಕರಣದ ಪ್ರಕ್ರಿಯೆಯಲ್ಲಿ ಗಾಂಧಿ ಅವರು ಚಿಂತಿಸಿದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ವಿಷಯಗಳು ಪ್ರಸ್ತುತವಾಗುವುದು ಸಹ ಅನಿವಾರ್ಯ ಆಗಿದೆ. ಇದರ ಜೊತೆಗೆ ವಿಶ್ವೇಶ್ವರಯ್ಯ ಅವರು ಚಿಂತಿಸಿದ ಸ್ವಾವಲಂಬನೆಯ ಕೈಗಾರಿಕೆ-ತಂತ್ರಜ್ಞಾನ ದೇಶದ ಅಭಿವೃದ್ಧಿಗೆ ಅವಶ್ಯಕವಾಗಿದೆ. ಒಬ್ಬರ ತತ್ತ್ವಗಳನ್ನು ಅಳವಡಿಸಿಕೊಂಡು ಇನ್ನೊಬ್ಬರ ತತ್ತ್ವಗಳನ್ನು ಕೈಬಿಡುವುದು ಇಂದು ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ಇವರಿಬ್ಬರ ತತ್ತ್ವಗಳು ಚಿಂತನೆಗಳು ನಮ್ಮ ಸನ್ನಿವೇಶಕ್ಕೆ ತಕ್ಕ ಹಾಗೆ ಬಳಕೆ ಆಗಬೇಕಿದೆ.

ಜಾಗತೀಕರಣಕ್ಕೆ ಒಳಪಟ್ಟಿರುವ ಭಾರತವು ಅದರ ತತ್ತ್ವಗಳಾದ ಉದಾರೀಕರಣ, ಖಾಸಗೀಕರಣ ನೀತಿಯನ್ನು ಅಳವಡಿಸಿಕೊಳ್ಳುತ್ತಿದೆ. ಇದರಿಂದಾಗಿ ಸಾರ್ವಜನಿಕ ವಲಯದ ಉದ್ದಿಮೆಗಳು ಸಹ ಖಾಸಗೀಕರಣಗೊಳ್ಳುತ್ತಿವೆ. ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳು, ಕೈಗಾರಿಕೆಗಳಲ್ಲಿ ಹೆಚ್ಚು ಉತ್ಪಾದನೆ ಮಾಡುವುದಕ್ಕೆ ಮತ್ತು ಪ್ರಗತಿ ಸಾಧಿಸುವುದಕ್ಕೆ ಕಂಪ್ಯೂಟರೀಕರಣಗೊಂಡಿವೆ. ಇದರ ಪರಿಣಾಮವಾಗಿ ಸರ್ಕಾರವು ಪ್ರತಿವರ್ಷ ಉದ್ಯೋಗಗಳನ್ನು ಕಡಿತಗೊಳಿಸುತ್ತಾ ಬರುತ್ತಿದೆ. ಈ ಎಲ್ಲ ಹಿನ್ನೆಲೆಗಳಿಂದ ನಿರುದ್ಯೋಗದ ಸಮಸ್ಯೆಯು ಮತ್ತಷ್ಟು ಉಲ್ಬಣಗೊಳ್ಳುತ್ತಿದೆ. ಅಷ್ಟೇ ಅಲ್ಲದೇ ಭಾರತವು ಸಂವಿಧಾನ ಬದ್ಧವಾಗಿ ಮೀಸಲಾತಿಯ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದ್ದರೂ ಸಹ, ಅದನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲ. ಖಾಲಿ ಇರುವ ಉದ್ಯೋಗಗಳನ್ನು ಸರ್ಕಾರವು ರದ್ದುಗೊಳಿಸುತ್ತಿದೆ. ಆದ್ದರಿಂದಲೇ ಹಿರಿಯ ಸಾಹಿತಿಗಳಾದ ಡಾ. ಯು.ಆರ್. ಅನಂತಮೂರ್ತಿ ಅವರು ಖಾಸಗೀಕರಣದಲ್ಲೂ ಮೀಸಲಾತಿಯ ಸೌಲಭ್ಯಗಳನ್ನು ಕಲ್ಪಿಸುವುದು ಸೂಕ್ತ ಎಂದು ಅಭಿಪ್ರಾಯಪಟ್ಟಿರುವುದು. ಆಗ ಮಾತ್ರ ಸಮಾಜದಲ್ಲಿನ ಹಿಂದುಳಿದ ಹಾಗೂ ಶೋಷಿತ ವರ್ಗದ ಜನರು ಉದ್ಯೋಗಾವಕಾಶಗಳನ್ನು ಪಡೆದುಕೊಳ್ಳಬಹುದು. ಅಂತೆಯೇ ಅವರು ಸಾಮಾಜಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಸಾಧ್ಯ. ಆಗ ಮಾತ್ರ ಸಮಾಜದಲ್ಲಿ ಸಮಾನತೆಯನ್ನು ಕಾಯ್ದುಕೊಳ್ಳಲು ಸಾಧ್ಯ.

ಇಂದು ಭಾರತವು ಪ್ರಪಂಚದಲ್ಲೇ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಎರಡನೆಯ ರಾಷ್ಟ್ರ. ಇದರಿಂದ ಸರ್ಕಾರವು ಎಲ್ಲರಿಗೂ ಉದ್ಯೋಗ ಕಲ್ಪಿಸಿಕೊಡಲು ಸಾಧ್ಯವಾಗದಿದ್ದರೆ ಮೂಲ ಕೈಗಾರಿಕೆಗಳಾದ ಗ್ರಾಮ ಅಥವಾ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಬೇಕು. ಗುಡಿ ಕೈಗಾರಿಕೆಗಳಾದ ಹೈನುಗಾರಿಕೆ, ಮರಗೆಲಸ, ಚರ್ಮ ಹದಮಾಡುವುದು, ಬಟ್ಟೆ ನೇಯುವುದು ಮೊದಲಾದ ಕರಕುಶಲ ಕಲೆಗಳಿಗೂ ಧನಸಹಾಯ ಮತ್ತು ಪ್ರೋತ್ಸಾಹ ನೀಡಬೇಕು. ಅಲ್ಲದೆ ಅವುಗಳು ಉತ್ಪಾದನೆ ಮಾಡಿದ ವಸ್ತುಗಳಿಗೆ ಮಾರುಕಟ್ಟೆಯನ್ನು ಒದಗಿಸುವುದರ ಜೊತೆಗೆ ಬೆಂಬಲ ಬೆಲೆ ನಿಗದಿ ಮಾಡಬೇಕು. ಆಗ ಮಾತ್ರ ಭಾರತದ ಸಮಾಜದಲ್ಲಿರುವ ಬಡಜನರಿಗೆ ಉದ್ಯೋಗ ದೊರೆಯುವುದಲ್ಲದೆ ನೆಮ್ಮದಿಯ ಜೀವನ ನಡೆಸಲು ಸಾಧ್ಯ. ಇಂಥ ಚಿಂತನೆಗಳನ್ನು ಗಾಂಧಿ ಮತ್ತು ವಿಶ್ವೇಶ್ವರಯ್ಯ ಅವರುಗಳು ಮಾಡಿದ್ದಾರೆ. ಆದರೆ ನಮ್ಮ ಅಧ್ಯಯನಗಳು ಕೇವಲ ಗಾಂಧಿ ಅವರನ್ನು ಮಾತ್ರ ಹೆಸರಿಸುತ್ತಿವೆ.

ಭಾರತದಲ್ಲಿನ ಹೇರಳವಾದ ನೈಸರ್ಗಿಕ ಸಂಪತ್ತನ್ನು ಅದರಲ್ಲೂ, ಮೈಸೂರು ಸಂಸ್ಥಾನದಲ್ಲಿನ ಸಂಪತ್ತನ್ನು ಸಮರ್ಪಕವಾಗಿ ಬಳಸಿಕೊಳ್ಳಲು ವಿಶ್ವೇಶ್ವರಯ್ಯ ಅವರು ಪ್ರಯತ್ನಿಸಿದರು. ಅವರು ಬಯಸಿದ್ದ ಸ್ವಾವಲಂಬನೆಯ ಚಿಂತನೆಯಿಂದ ಗಂಧದ ಕಾರ್ಖಾನೆ, ಸಾಬೂನು ಕಾರ್ಖಾನೆ, ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಇನ್ನು ಮುಂತಾದ ಕೈಗಾರಿಕೆಗಳನ್ನು ಸರ್ಕಾರದ ವತಿಯಿಂದ ಸ್ಥಾಪನೆಗೊಂಡವು. ಈ ನಿಟ್ಟಿನಲ್ಲಿ ಸರ್ಕಾರವು ಹೊರದೇಶಗಳಿಂದ ಆಮದು ಮಾಡಿಕೊಳ್ಳದೆ ಮತ್ತು ಪ್ರತಿಯೊಂದು

ಕ್ಷೇತ್ರಗಳನ್ನು ಖಾಸಗೀಕರಣಗೊಳಿಸದೆ, ಕೆಲವೊಂದು ಕೈಗಾರಿಕೆಗಳನ್ನು ತಾನೇ ಸ್ಥಾಪಿಸುವುದು ಸೂಕ್ತ. ಆಗ ಮಾತ್ರ ಮೂಲ ಕೈಗಾರಿಕೆಗಳು ಉತ್ಪಾದನೆ ಮಾಡಿದ ವಸ್ತುಗಳನ್ನು, ದೊಡ್ಡ ಕೈಗಾರಿಕೆಗಳು ಸಮರ್ಪಕವಾಗಿ ಬಳಸಿಕೊಳ್ಳಲು ಸಾಧ್ಯ.

ಗಾಂಧಿ ಅವರ ಮಾನವೀಯತೆ, ಶಾಂತಿ, ಅಹಿಂಸೆಯ ತತ್ತ್ವಗಳು ಹಿಂದೆಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತ ಆಗುತ್ತಿವೆ. ಈ ತತ್ತ್ವಗಳನ್ನು ಜಗತ್ತಿನ ಎಲ್ಲ ರಾಷ್ಟ್ರಗಳು ಅಳವಡಿಸಿಕೊಳ್ಳುವುದು ಸೂಕ್ತ. ಇಂದು ಭಾರತವು ಸೇರಿದಂತೆ ಅನೇಕ ರಾಷ್ಟ್ರಗಳು ಹೊಂದಿರುವ ಅತ್ಯಾಧುನಿಕ ಶಸ್ತ್ರಾಸ್ತ್ರಗಳು ಇಡೀ ಮಾನವ ಜನಾಂಗವನ್ನೇ ನಾಶಮಾಡುವಷ್ಟು ಅಪಾಯಕಾರಿ ಆಗಿವೆ. ಹೀಗಾಗಿ ಇಂದು ಪ್ರತಿಯೊಂದು ರಾಷ್ಟ್ರಗಳ ಜನರು ಭಯದ ನೆರಳಿನಲ್ಲಿಯೆ ಬದುಕುವ ಸ್ಥಿತಿ ತಲೆದೋರಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ರಾಷ್ಟ್ರವು ನಿಶಸ್ತ್ರೀಕರಣಕ್ಕೆ ಒಳಪಟ್ಟು, ಗಾಂಧಿ ಅವರ ಅಹಿಂಸೆ ಮತ್ತು ಶಾಂತಿ, ಸತ್ಯಾಗ್ರಹದ ತತ್ತ್ವಗಳನ್ನು ಪಾಲಿಸಬೇಕಾಗಿದೆ. ಆಗ ಮಾತ್ರ ಜಗತ್ತಿನ ಮಾನವ ಜನಾಂಗವು ಶಾಂತಿ, ನೆಮ್ಮದಿಯಿಂದ ಉಳಿದು ಬಾಳಲು ಸಾಧ್ಯ. ಅವರು ಭಾರತದ ಜನಸಮುದಾಯಕ್ಕೆ ಚಿಂತಿಸದೆ ಇಡೀ ಜಗತ್ತಿನ ಕಲ್ಯಾಣಕ್ಕಾಗಿ ಚಿಂತಿಸಿದವರು. ಈ ಹಿನ್ನೆಲೆಯಲ್ಲಿ ಮಾನವನ ಉಳಿವಿಗಾಗಿ ಅವರ ತತ್ತ್ವ ಪ್ರಸ್ತುತ.

ಅಂತೆಯೇ ವಿಶ್ವೇಶ್ವರಯ್ಯ ಅವರ ತತ್ತ್ವಗಳು, ಚಿಂತನೆಗಳು ಪ್ರಸ್ತುತ ಆಗುತ್ತಿವೆ. ಇಂದು ಎಲ್ಲ ರಾಷ್ಟ್ರಗಳು ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಉತ್ಪಾದನೆ ಮಾಡಿ ಸಂಗ್ರಹಿಸಿ ಇಟ್ಟುಕೊಂಡಿವೆ. ಹೀಗಾಗಿ ಭಾರತವು ಸಹ ಇವುಗಳನ್ನು ಹೊಂದುವುದು ಸೂಕ್ತ. ಈ ಆಧುನಿಕ ಶಸ್ತ್ರಾಸ್ತ್ರಗಳು ಇಂದಿನ ಪರಿಸ್ಥಿತಿಯಲ್ಲಿ ದೇಶದ ರಕ್ಷಣೆಗೆ ಅತ್ಯಂತ ಪ್ರಮುಖವಾದವುಗಳು. ಭಾರತವು ಅಣ್ವಸ್ತ್ರಗಳನ್ನು ತಯಾರು ಮಾಡಿ ಯಶಸ್ವಿಯಾಗಿ ಪ್ರಯೋಗಿಸಿದೆ. ಇದು ಪ್ರಪಂಚದ ರಾಷ್ಟ್ರಗಳಿಗೆ ಒಂದು ರೀತಿಯಲ್ಲಿ ಎಚ್ಚರಿಕೆಯ ಘಂಟೆಯನ್ನು ಬಾರಿಸಿದಂತೆಯೂ ಸರಿ. ಅಣ್ವಸ್ತ್ರ ರಾಷ್ಟ್ರಗಳ ಗುಂಪಿಗೆ ಭಾರತವು ಸೇರಿಕೊಂಡಿದೆ. ಇಂದಿನ ಸಂದರ್ಭವನ್ನು ಆಲೋಚಿಸಿದರೆ ಯುದ್ಧವನ್ನು ಕೈಗೊಂಡೇ ಪ್ರಪಂಚದಲ್ಲಿ ಶಾಂತಿಯನ್ನು ಸ್ಥಾಪಿಸಬೇಕಾಗಿದೆ ಎಂಬ ಸ್ಥಿತಿ ನಿರ್ಮಾಣವಾಗಿದೆ. ಯುದ್ಧವು ಶಾಂತಿಗಾಗಿ ಎಂಬಂತೆ.

ಇಂಥ ಚಿಂತಕರ ವಿರೋಧಾಭಾಸಗಳನ್ನು ಕುರಿತ ಅಧ್ಯಯನಗಳು ಇನ್ನಷ್ಟು ಆಗಬೇಕಿವೆ. ಈ ನಿಟ್ಟಿನಲ್ಲಿ ಇದೊಂದು ಕಿರು ಪ್ರಯತ್ನವಷ್ಟೇ.

# ಅನುಬಂಧ

೧. ಆಯ್ದ ಪ್ರಾಥಮಿಕ ಆಕರಗಳು
೨. ಎಂ. ವಿಶ್ವೇಶ್ವರಯ್ಯ ಅವರ ಕೃತಿಗಳು
೩. ಆಯ್ದ ಪರಾಮರ್ಶನ ಕೃತಿಗಳು
೪. ಆಯ್ದ ನಿಯತಕಾಲಿಕೆಗಳು

## ೧. ಆಯ್ದ ಪ್ರಾಥಮಿಕ ಆಕರಗಳು.

೧. ವಿಶ್ವೇಶ್ವರಯ್ಯ, ಎಂ., (೧೯೬೦), ಮೆಮೋರಿಸ್ ಆಫ್ ಮೈವರ್ಕಿಂಗ್ ಲೈಫ್, ಗೌರ್ವನಮೆಂಟ್ ಆಫ್ ಇಂಡಿಯ, ಮಿನಿಸ್ಟ್ರಿ ಆಫ್ ಇನ್‌ಫಾರ್‌ಮೇಶನ್ ಅಂಡ್ ಬ್ರಾಡ್‌ಕಾಸ್ಟಿಂಗ್.

೨. ಸ್ಪೀಚಸ್ ಬೈ ಸರ್.ವಿಶ್ವೇಶ್ವರಯ್ಯ (೧೯೧೦ ರಿಂದ ೧೯೧೭), (೧೯೧೭) ಬೆಂಗಳೂರು; ಗರ್ವನಮೆಂಟ್ ಪ್ರೆಸ್.

೩. ನಂ. ೯೭. ಮೈಸೂರ್ ಪ್ಯಾಲೇಸ್ ಪೇಪರ್, (೧೯೮೨) ಸರ್.ಎಂ.ವಿಶ್ವೇಶ್ವರಯ್ಯ ಲೆಟರ್ ಟು ದಿ ಹುಜೂರ್ ಸೆಕ್ರಟರಿ, ವಾಲ್ಯೂಮ್ IV ೧೯೧೭ (ಕ.ರಾ.ಪತ್ರಾಗಾರ).

೪. ಹಿಸ್ ಹೈನೆಸ್ ದಿ ಮಹಾರಾಜಾಸ್ ಪ್ರೈವೇಟ್ ಸೆಕ್ರೆಟ್ರಿಯೇಟ್ ೧೯೧೯-೨೦, ಸೀರಿಯಲ್ ನಂ. ೯೭ ಸಬ್ಸಿಡರಿ ಪೇಪರ,. ವ್ಯಾಲೂಮ್ I ಪು.೧-೮೮ (ಕ.ರಾ.ಪತ್ರಾಗಾರ).

೫. ಇಂಡಸ್ಟ್ರಿಸ್ ಅಂಡ್ ಕಾರ್ಮಸ್ (೧೮೭೨-೧೯೨೫) (ಕ.ರಾ.ಪತ್ರಾಗಾರ).

೧. ದಿ ಹೋಮ್ ಇಂಡಸ್ಟ್ರಿಯಲ್ ಸ್ಕೀಮ್ಸ್, (೧೯೧೬) (ಕ.ರಾ.ಪತ್ರಾಗಾರ).

೨. ರಿ ದಿ ಸಿಟಿಂಗ್ ಆಫ್ ದಿ ಇಂಡಿಯನ್ ಇಂಡಸ್ಟ್ರಿಯಲ್ ಕಮೀಶನ್ ಇನ್ ಬೆಂಗಳೂರು.

೬. ರೀ ಗ್ರಾಂಟ್ ಅಟ್ ಆಚ್ಯುವ್‌ಮೆಂಟ್ಸ್ ಫಾರ್ ದಿ ಇಂಪ್ರೂವ್‌ಮೆಂಟ್ಸ್ ಆಫ್ ದಿ ಹೋಮ್ ಇಂಡಸ್ಟ್ರೀಸ್ (೧೯೧೯)(ಕ.ರಾ.ಪತ್ರಾಗಾರ).

೭. ಎಚ್.ಆರ್.ಎಸ್. ಲಿಸ್ಟ್ ಆಫ್ ಪ್ರೈವೇಟ್ ಪೇಪರ್ಸ್, ನಂ. ೧೪೩ ಸರ್.ಎಂ.ವಿಶ್ವೇಶ್ವರಯ್ಯ ವಂಶ ಚರಿತ್ರೆ, (ಕ.ರಾ.ಪತ್ರಾಗಾರ).

೮. ನಂ ೨೯೨ ಗಾಂಧೀಸ್ ಲೆಟರ್ (೨ ಫೋಟೋಸ್) ಬೈಐ ಮತ್ತು ಪಿಡಿಪಾರ್ಟ್‌ಮೆಂಟ್ (ಕ.ರಾ.ಪತ್ರಾಗಾರ).

೯. ಹಯವದನ ರಾವ್ ಸಿ. (೧೯೨೯) ಮೈಸೂರು ಗೆಜೆಟಿಯರ್, ವಾಲ್ಯೂಮ್ IV, ಬೆಂಗಳೂರು ಗರ್ವನಮೆಂಟ್ ಪ್ರೆಸ್.

೧೦. ಮೈಸೂರ್ ಬುಕ್ ಬುಲೆಟಿನ್

೧೨. ಮೈಸೂರ್ ಬ್ಲ್ಯೂ ಬುಕ್ ಜರ್ನಲ್ ವ್ಯಾಲ್ಯೂಮ್ II ೧೯೧೬.೧೯೧೭, ಇತ್ಯಾದಿ

## ೨. ವಿಶ್ವೇಶ್ವರಯ್ಯ ಅವರ ಕೃತಿಗಳು

01. Constructing India (1920)

02. Rural Industrialisation in India(1931)

03. Unemployment in India: its casues and cure (1932)

04. Planned Economy for India(1934)

05. Nation building: A Five year Plan for the Province (1937)

06. District development Scheme (1939)

07. Prosperity through Industry(1942)

08. Village Industrialisation(1945)

09. A brief memoirs of my complete working life (1951)

10. Memoirs of my working life (1959)

11. A Vision of Prosperous Mysore

12. Rapid development of Industries, etc

## ೩. ಆಯ್ದ ಪರಾಮರ್ಶನ ಕೃತಿಗಳು

೧. ಅರವಿಂದ ಮಾಲಗತ್ತಿ., (ಸಂ), (೧೯೯೧), ಡಾ.ಅಂಬೇಡ್ಕರ್ ವಿಚಾರಧಾರೆ, ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

೨. ಅನಂತಮೂರ್ತಿ ಯು.ಆರ್., (೨೦೦೨), ಅಖಿಲ ಭಾರತ ೬೯ನೆಯ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು, ಸಮ್ಮೇಳನಾಧ್ಯಕ್ಷರ ಭಾಷಣ, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್ತು.

೩. ಖಾದ್ರಿ ಶಾಮಣ್ಣ., (ಸಂ), (೧೯೬೯), ಅರ್ಥವಿಚಾರ, ಬೆಂಗಳೂರು; ಗಾಂಧಿ ಸ್ಮಾರಕ ನಿಧಿ.

೪. ಗುಂಡಪ್ಪ ಡಿ.ವಿ., (೧೯೭೧), ಮೈಸೂರಿನ ದಿವಾನರುಗಳು (ಸ್ವಾತಂತ್ರ್ಯ ಪೂರ್ವದ ಆರು ದಶಕಗಳು), ಮೈಸೂರು; ಕಾವ್ಯಾಲಯ ಪ್ರಕಾಶಕರು.

೫. ಗುರುರಾಜ್ಯ., (೧೯೫೭), ಆದರ್ಶ ಶಿಲ್ಪಿ, ಬೆಂಗಳೂರು; ಸುದರ್ಶನಂ ಅಂಡ್ ಕಂಪನಿ

೬. ಗೊರೂರು ರಾಮಸ್ವಾಮಿ ಅಯ್ಯಂಗಾರ್., (ಭಾ), (೧೯೯೫) ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ, ಅಹಮದಾಬಾದ್; ನವಜೀವನ ಪ್ರಕಾಶನ ಮಂದಿರ.

೭. ಗೋವಿಂದರಾಜು ಸಿ.ಆರ್., (೧೯೯೫), ಕನ್ನಡ-ಕರ್ನಾಟಕತ್ವ, ಹಂಪಿ; ಕನ್ನಡ ವಿಶ್ವವಿದ್ಯಾಲಯ

೮. ಚಂದ್ರಶೇಶರ್ ಎಸ್., (೧೯೮೩), ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ: ಕೆಲವು ಒಳನೋಟಗಳು, ಬೆಂಗಳೂರು; ಅಂಕಣ ಪ್ರಕಾಶನ

೯. ಚಂದ್ರಶೇಖರ್ ಎಸ್., (೧೯೯೨), ಅಂಬೇಡ್ಕರ್ ಮತ್ತು ಗಾಂಧಿ, ಹೆಗ್ಗೋಡು (ಸಾಗರ): ಅಕ್ಷರ ಪ್ರಕಾಶನ.

೧೦. ಜಯಪ್ಪಗೌಡ, ಡಿ.ಎಸ್., (೧೯೯೪), ದಿವಾನ್ ಸರ್.ಎಂ.ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು (೧೯೧೨-೧೮), ಮೈಸೂರು; ಶುಭೋದಯ ಪ್ರಕಾಶನ

೧೧. ಜ್ಯೋತಿಹರ್ಲಾಪುರ, ಕು., (೨೦೦೦), ಸರ್.ಎಂ.ವಿಶ್ವೇಶ್ವರಯ್ಯ, ಗದಗ; ಪಾರು ಪ್ರಕಾಶನ.

೧೨. ತಿಪ್ಪೇರುದ್ರ ಸ್ವಾಮಿ, ಎಚ್., (ಅನು).(ಸಂ), (೧೯೭೪) ಮಹಾತ್ಮ (ಸಂ.೧), ಮೈಸೂರು; ಗಾಂಧಿ ಭವನ ಮೈಸೂರು ವಿಶ್ವವಿದ್ಯಾನಿಲಯ

೧೩. ನರಸಿಂಹಸ್ವಾಮಿ ಕೆ.ಎಸ್., (ಅನು) (೧೯೬೧), ನನ್ನ ಕನಸಿನ ಭಾರತ, ಮೈಸೂರು; ಕಾವ್ಯಾಲಯ ಪ್ರಕಾಶಕರು.

೧೪. ನಾರಾಯಣ ರಾವ್ ವಿ.ಎಸ್., (೧೯೫೨), ಮೋಕ್ಷಗುಂಡಂ ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ, ಬೆಂಗಳೂರು; ವಿಚಾರ ಸಾಹಿತ್ಯ ಲಿಮಿಟೆಡ್

೧೫. ನಾರಾಯಣ ರಾವ್ ವಿ.ಎಸ್., (೧೯೭೮), ಮೋಕ್ಷಗುಂಡಂ ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ, ಮೈಸೂರು; ಗೀತಾ ಬುಕ್ ಹೌಸ್.

೧೬. ನಾರಾಯಣ ರಾವ್ ವಿ.ಎಸ್., (೧೯೮೪), ಮೋಕ್ಷಗುಂಡಂ ವಿಶ್ವೇಶ್ವರಯ್ಯ ಇಂಡಿಯಾ, ದೆಹಲಿ; ನ್ಯಾಷನಲ್ ಬುಕ್ ಟ್ರಸ್ಟ್.

೧೭. ಪಾಟೀಲ ಪುಟ್ಟಪ್ಪ., (೧೯೮೩), ನವಕರ್ನಾಟಕ ನಿರ್ಮಾಪಕರು ಭಾಗ-೧, ಬೆಂಗಳೂರು; ವಿಶ್ವ ಕನ್ನಡ ಸಮ್ಮೇಳನ.

೧೮. ಮರುಳಸಿದ್ದಯ್ಯ ಎಚ್.ಎಂ.,(ಅನು) (೧೯೯೩), ಗಾಂಧೀಯ ಅರ್ಥಶಾಸ್ತ್ರ ಆಕರಗಳು, ತಿರುಳು ಮತ್ತು ಬಳುವಳಿ, ಬೆಂಗಳೂರು; ಅಭ್ಯುದಯ ಪ್ರಕಾಶನ.

೧೯. ಮಾಸ್ತಿ ವೆಂಕಟೇಶ ಅಯ್ಯಂಗಾರ್., (೧೯೬೦), ಸರ್.ಎಂ.ವಿಶ್ವೇಶ್ವರಯ್ಯ, ಬೆಂಗಳೂರು; ಜೀವನ ಕಾರ್ಯಾಲಯ ಟ್ರಸ್ಟ್ (ರಿ).

೨೦. ಮೊಗಳ್ಳಿ ಗಣೇಶ.,(೧೯೯೯), ದಲಿತರ ಮತ್ತು ಜಾಗತೀಕರಣ, ಹಂಪಿ; ಕನ್ನಡ ವಿಶ್ವ ವಿದ್ಯಾಲಯ.

೨೧. ಯಾಮುನಾಚಾರ್ಯ ಎಂ.,(ಪ್ರ.ಸಂ), (೧೯೬೧), ರಾಜನೀತಿ, ಮೈಸೂರು; ಗಾಂಧೀ ಗ್ರಂಥ ಮಾಲೆಯ ಸಂಪಾದಕ ಮಂಡಲಿ.

೨೨. ಯಾಮುನಾಚಾರ್ಯ ಎಂ., (ಪ್ರ.ಸಂ), (೧೯೬೧), ಸಂಭಾಷಣೆ, ಮೈಸೂರು; ಗಾಂಧೀ ಗ್ರಂಥ ಮಾಲೆಯ ಸಂಪಾದಕ ಮಂಡಲಿ.

೨೩. ಯಾಮುನಾಚಾರ್ಯ ಎಂ., (ಪ್ರ.ಸಂ), (೧೯೬೨) ಭಾಷಣಗಳು ಮತ್ತು ಹೇಳಿಕೆಗಳು, ಮೈಸೂರು; ಗಾಂಧೀ ಗ್ರಂಥ ಮಾಲೆಯ ಸಂಪಾದಕ ಮಂಡಲಿ.

೨೪. ರಘುಸುತ.,(೧೯೬೯), ಮಂತ್ರರ್ಷಿ, ಬೆಂಗಳೂರು; ಪುಲಕೇಶಿ ಪ್ರಕಾಶನ.

೨೫. ರಮಾ ಕೆ.ಎಸ್.,(೨೦೦೦), ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಬೆಂಗಳೂರು; ಮರ್ಸರ್ಸಿಟಿ ನಾರಾಯಣ ಅಯ್ಯಂಗಾರ್.

೨೬. ರಾಜರತ್ನಂ ಜಿ.ಪಿ.,(ಸಂಕಲನ), ನಮ್ಮ ವಿಶ್ವೇಶ್ವರಯ್ಯ, ಬೆಂಗಳೂರು; ನಿರ್ಮಲ ಭಾರತೀ ಸಂಘ.

೨೭. ರಾಮಯ್ಯ ಪಿ.ಆರ್., (೧೯೬೯), ದಯಾಸಾಗರ ಎಂ.ವೆಂಕಟಕೃಷ್ಣಯ್ಯ ಜೀವನ ಮತ್ತು ಸಾಧನೆ, ಮೈಸೂರು; ಗೀತಾ ಬುಕ್ ಹೌಸ್.

೨೮. ಲಕ್ಷ್ಮಣ್ ತೆಲಗಾವಿ., (೧೯೯೯), ಹಿಂದುಳಿದವರ್ಗಗಳ ಮತ್ತು ದಲಿತ ಚಳವಳಿಗಳು, ಹಂಪಿ; ಕನ್ನಡ ವಿಶ್ವವಿದ್ಯಾಲಯ

೨೯. ಶರ್ಮ ತಿ.ತಾ., (೧೯೭೧), ಮೋಕ್ಷಗುಂಡಂ ಬೆಂಗಳೂರು; ಪುರೋಗಾಮಿ ಸಾಹಿತ್ಯ ಸಂಘ.

೩೦. ಶಂಕರ ಮು.ನ., (ಸಂ), (೧೯೬೮), ಸ್ವರ್ಣಭೂಮಿ, ಕೋಲಾರ ಜಿಲ್ಲೆಯ ಪರಿಚಯಾತ್ಮಕ ಹೊತ್ತಿಗೆ, ಕೋಲಾರ; ಸಹಕಾರ ಸಾಹಿತ್ಯ ಸಂಘ.

೩೧. ಶಕುಂತಲಾ ಕೃಷ್ಣಮೂರ್ತಿ., (೧೯೬೦), ಡಾ.ಎಂ.ವಿಶ್ವೇಶ್ವರಯ್ಯ, ಬೆಂಗಳೂರು; ಬೆಂಗಳೂರು ಪ್ರಿಂಟಿಂಗ್ ಪ್ರೆಸ್.

೩೨. ಶೇಷಗಿರಿ ರಾವ್ ಎಸ್.ಎಸ್., (೧೯೯೨) ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಬೆಂಗಳೂರು; ಕನ್ನಡ ಸಾಹಿತ್ಯ ಪರಿಷತ್.

೩೩. ಶೂದ್ರ ಶ್ರೀನಿವಾಸ್., (ಸಂ), (೧೯೯೦), ಶೂದ್ರಗಾಂಧಿ ತತ್ತ್ವಚಿಂತನೆ ಮತ್ತು ವಿಕೇಂದ್ರಿಕರಣ, (ವಿಶೇಷ ಸಂಚಿಕೆ)

೩೪. ಸುಂದರರಾವ್ ಬ.ನ. ಮತ್ತು ವೆಂಕಟೇಶ ಶಾಸ್ತ್ರಿ., (೧೯೮೨) ಸರ್.ಎಂ.ವಿಶ್ವೇಶ್ವರಯ್ಯ, ಬೆಂಗಳೂರು; ವಸಂತ ಸಾಹಿತ್ಯ ಗ್ರಂಥಮಾಲೆ.

೩೫. ಸುಬ್ಬಣ್ಣ ಮತ್ತು ಅಕ್ಷರ., (ಅನು), (೧೯೮೨), ಮಾರ್ಕ್ಸ್ ಮತ್ತು ಗಾಂಧಿ, ಬೆಂಗಳೂರು: ಜನ ಪ್ರಕಾಶನ.

೩೬. ಸಿದ್ಧವನಹಳ್ಳಿ ಕೃಷ್ಣಶರ್ಮ.,(ಸಂ), (೧೯೭೧), ಹಿಂದ್ ಸ್ವರಾಜ್ಯ, ಬೆಂಗಳೂರು; ಕರ್ನಾಟಕ ಗಾಂಧೀ ಸ್ಮಾರಕ ನಿಧಿ.

## ೩. ಆಯ್ದ ನಿಯತಕಾಲಿಕೆಗಳು

೧. ಹೊಸತು

೨. ಶೂದ್ರ

೩. ಇತಿಹಾಸ ದರ್ಶನ

೪. ಸಂಕ್ರಮಣ

೫. ಕನ್ನಡ ನುಡಿ

೬. ಸುಧಾ

೭. ಮಲ್ಲಿಗೆ

೮. ಕನ್ನಡ ಪ್ರಭ

೯. ಪ್ರಜಾವಾಣಿ

೧೦. ಸಂಯುಕ್ತ ಕರ್ನಾಟಕ

೧೧. ವಿಜಯ ಕರ್ನಾಟಕ

೧೨. ಮಂಡ್ಯ ಸುದ್ದಿ

೧೩. ಉದಯವಾಣಿ

೧೪. ಕಾರ್ಮಿಕ ದೃಷ್ಟಿಕೋನ

೧೫. Karnataka Journal of Politics

೧೬. Star of Mysore

-ಇತ್ಯಾದಿ